

ನೋಡಿರೈ ಕಲ್ಪ ಭೂರುಹರ
ನಾಡೊಳಗಚ್ಯುತನ ದಾಸರು ನರರೇ ? ||ಪ||

ಕ್ಷೀರ ಕೂಡಿದ ಜಲವ ನೀರೆನ್ನಬಹುದೇ
ನೀರೊಳುದಿಸಿದ ಮುತ್ತು ನೀರಾಗೋದೆ
ಆರಿದ ಭಾಂಡ ಮೃತ್ತಿಕೆ ಕೂಡಲರಿವುದೇ
ಶೌರಿಯ ಶರಣರ ನರರೆನ್ನಬಹುದೇ ||೧||

ಪರಬ್ರಹ್ಮ ವಿಷ್ಣುವು ಚರಬ್ರಹ್ಮ ವೈಷ್ಣವ
ಪರಿಕಿಸಲರಿಯರು ಮತಿಭ್ರಷ್ಟರು
ಧರೆಯೊಳು ಪುರಂದರ ವಿಠಲನ ದಾಸರ
ನರರೆಂದವನಿಗೆ ಘೋರ ರೌರವ ನರಕ ||೨||

ಹರಿಗೆರೆದ ನೀರು ತೀರ್ಥವೆನಿಸಿತು ನರ
ಹರಿಯುಂಡ ಚರು ಪ್ರಸಾದವಾಯ್ತು
ಹರಿದಾಸರೆಂಬ ನಾಮಧಾರಿಗರನ್ನು
ನರರೆನ್ನಬಹುದೇನೊ ಸುರರಿಗಧಿಕರನ್ನು ||೩||

---ಶ್ರೀ ಪುರಂದರದಾಸರು.

ಸಂದರ್ಶಿಸಿ. ಆನಂದಿಸಿ.

# ಶ್ರೀ ಕೋದಂಡರಾಮಸ್ವಾಮಿ ದೇವಾಲಯ

## ತಿರುಪತಿ.

## ವಾರ್ಷಿಕ ಬ್ರಹ್ಮೋತ್ಸವ





## 21--3--93 ರಿಂದ 30--3--93 ವರೆಗೆ

| | |
|---|---|
| 21--3--93 ಗುರುವಾರ | ಅಂಕುರಾರ್ಪಣೆ. |
| 22--3--93 ಶುಕ್ರವಾರ | ಧ್ವಜಾರೋಹಣ. |
| 26--3--93 ಶನಿವಾರ | ಗರುಡೋತ್ಸವ. |
| 29--3--93 ಸೋಮವಾರ | ರಥೋತ್ಸವ. |
| 30--3--93 ಮಂಗಳವಾರ | ಧ್ವಜಾವರೋಹಣ. |

ಸೂಚನೆ : ಬ್ರಹ್ಮೋತ್ಸವದ ದಿನಗಳಲ್ಲಿ ದಿನವೂ ಬೆಳಗ್ಗೆ ಸಾಯಂಕಾಲಗಳಲ್ಲಿ ವಿವಿಧ ವಾಹನ ಸೇವೆಗಳಿರುತ್ತವೆ. ಸಾಂಸ್ಕೃತಿಕ ಕಾರ್ಯಕ್ರಮಗಳು ಏರ್ಪಾಡಾಗಿರುತ್ತವೆ. ಶ್ರೀ ಕೋದಂಡರಾಮಸ್ವಾಮಿ ದೇವಾಲಯ ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದಿಂದ ಅರ್ಧ ಮೈಲಿ ದೂರದಲ್ಲಿ ಅಲಿಪಿರಿಗೆ ಹೋಗುವ ಮಾರ್ಗದಲ್ಲಿದೆ.

ನೀವೂ ಬನ್ನಿ. ತಿ. ತಿ. ದೇ. ನಿಮ್ಮವರನ್ನೂ ಕರೆತನ್ನಿ.




ಸಂಪುಟ ೨೩] ಫೆಬ್ರವರಿ ೧೯೯೩ [ಸಂಚಿಕೆ ೯


# ವಿಷಯಸೂಚಿ



ರಕ್ಷಾಪತ್ರ : ಶ್ರೀ ಕಾಳ ಹಸ್ತೀಶ್ವರಸ್ವಾಮಿ, ಶ್ರೀ ಜ್ಞಾನ ಪ್ರಸೂನಾಂಬಿಕಾದೇವಿ.
ಒಳಗಡೆ : 1. ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ--ಶ್ರೀನಿವಾಸಮಂಗಾಪುರ.
2. ಕಪಿಲತೀರ್ಥದಲ್ಲಿ ಬ್ರಹ್ಮೋತ್ಸವದ ದೃಶ್ಯಗಳು.


ಗೌರವ ಸಂಪಾದಕರು :
ಶ್ರೀ ಡಿ.ವಿ.ಎಲ್.ಎನ್. ಮೂರ್ತಿ, ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ
ತಿ.ತಿ.ದೇ., ತಿರುಪತಿ.

ಸಂಪಾದಕ :
ಕೆ. ಸುಬ್ಬಾರಾವು, ಎಂ.ಎ.

ಉಪಸಂಪಾದಕ :
ಬಿ.ಎನ್. ಶ್ರೀನಿವಾಸನ್ ಎಂ.ಎ.,

ಮುದ್ರಣ :
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ
ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು.

**ಬಿಡಿ ಪ್ರತಿ ೧--೦೦**
**ವಾರ್ಷಿಕ ಚಂದಾ ೧೨--೦೦**




ಮನುಷ್ಯನ ಹುಟ್ಟಿನಿಂದ ಸಾವಿನವರೆಗೆ ಅವನ ದೈಹಿಕ ಆಧ್ಯಾತ್ಮಿಕ ಸಾಮಾಜಿಕ ಬೆಳವಣಿಗೆಗೆ ಬೇಕಾದ ಎಲ್ಲ ಕಚ್ಚಾ ಪದಾರ್ಥಗಳೂ ಪ್ರಕೃತಿಯಲ್ಲಿ ಸಿದ್ಧವಾಗಿವೆ. ಅವನ ಹುಟ್ಟಿಗೂ ಮೊದಲೇ ಅವೆಲ್ಲ ಸಿದ್ಧವಾಗಿದ್ದವು ಎಂದರೂ ತಪ್ಪಿಲ್ಲವೇನೊ. ಅಗತ್ಯಗಳನ್ನು ಪೂರೈಸಿಕೊಳ್ಳುವ ಪ್ರಾಣಿಯಾದ ಮನುಷ್ಯ ಕ್ರಮೇಣ ತನ್ನ ಬುದ್ಧಿಬಲದಿಂದ ಅನುಕೂಲಗಳನ್ನೂ ಪ್ರಕೃತಿದತ್ತವಾದದ್ದರಲ್ಲೇ ಅರಸಲು ಪ್ರಯತ್ನ ಪಡತೊಡಗಿದ. ಪಂಚೇಂದ್ರಿಯಗಳೂ ಇದ್ದವಲ್ಲ. ಹಾಗಾಗಿ ರುಚಿ ಪ್ರಜ್ಞೆಯೂ ಬೆಳೆಯಿತು. ಆಹಾರದಲ್ಲಿ ರುಚಿಯನ್ನೂ ದೊರೆಸಿ ಆನಂದವನ್ನು ಪಡೆಯತೊಡಗಿದ. ನುಂಗಿದ ತುತ್ತಿಗೆ ರುಚಿಯಿಲ್ಲವೆಂಬುದು ನಂತರ ತಿಳಿದು ಬಂದರೂ ತತ್ಕಾಲದ ಸುಖವೇ ಆರೋಗ್ಯಕ್ಕಿಂತ ಮುಖ್ಯವಾದಾಗ ಸುರೆಯ ಅವಿರ್ಭಾವ ಆಯಿತು.

ಇದು ಮನುಷ್ಯನ ಮೂಲಭೂತ ಬೆಳವಣಿಗೆಗೆ, ಮೆದುಳಿನ ಆರೋಗ್ಯಕ್ಕೆ ಅನಿಷ್ಟಕಾರಕ ಎಂಬುದು ತಿಳಿದರೂ ಪ್ರಯೋಜನ ಶೂನ್ಯವಾಯಿತು. ಶುಕ್ರಾಚಾರ್ಯನಂತಹ ತಿಳಿದವನೂ ಅದಕ್ಕೆ ದಾಸನೇ. ಪಾನದಿಂದ ಧರ್ಮಪ್ರಜ್ಞೆ ಹಾಳಾಗುತ್ತದೆ ಎಂಬುದನ್ನು ವಾಲ್ಮೀಕಿ, ರಾಜ್ಯದಲ್ಲಿ ಪಾನಾಸಕ್ತಿಯಿಂದ ಪರಿಸ್ಥಿತಿ ಹದಗೆಡುತ್ತದೆ ಎಂದು ವ್ಯಾಸರೂ ತಿಳಿಯಹೇಳಿದರೂ ಅದು ಉಚಿತ ಪ್ರಾಧಾನ್ಯ ಪಡೆಯಲಿಲ್ಲ ಎಂಬುದು ಎಲ್ಲರೂ ತಿಳಿದ ಅಂಶವೇ.

ಸ್ವಲ್ಪ ಹೆಚ್ಚು ತಿಳಿದವರು ಅದು ದೊರೆಯದಂತೆಯೇ ಮಾಡುವುದರಿಂದ ಒಳ್ಳೆಯ ಹಾದಿಯತ್ತ ಜನರನ್ನು ಒಯ್ಯಲು ಸಾಧ್ಯ ಎಂದು ವಾದಿಸಬಹುದು. ಶಾಸ್ತ್ರ ನಿಷೇಧವನ್ನೇ ಶಾಸನವೆನ್ನಬಹುದು. ಆದರೆ ಅದು ಇತರ ಒಳಮಾರ್ಗಗಳಿಗೂ ದಾರಿ ತೆಗೆಯಬಹುದು. ಶಾಸ್ತ್ರದ ಶಾಸನವನ್ನು ಕಾಂತಾಸಮ್ಮಿತವಾಗಿ ತಿಳಿಯ ಹೇಳುವಂತೆ ಆಗಬೇಕು. ಸುರೆಯ ದುಷ್ಪರಿಣಾಮಗಳ ಬಗ್ಗೆ ಜಾಗೃತಿ ಉಂಟಾಗುವ ವ್ಯಾಪಕ ಪ್ರಸಾರವಾಗಿ ಸ್ವಯಂ ಸಿದ್ಧತೆಯಿಂದ, ಮನಃಪೂರ್ವಕವಾಗಿ ತ್ಯಜಿಸಲು ಜನ ತಯಾರಾಗಬೇಕು. ಅಲ್ಲಿಯವರೆಗೆ ಬೇರೆ ದಾರಿಯಿಲ್ಲ ಎನ್ನುವುದು ವಿಚಾರವಂತರು ಯೋಚಿಸಬೇಕಾದ ಅಂಶ.

ಪ್ರಶ್ನೆ ಕೇವಲ ಸುರೆಯದು ಮಾತ್ರವೇ ಅಲ್ಲ. ಎಲ್ಲ ರೀತಿಯ ಮಾದಕತೆಯದೂ ಹೌದು. ಸುರೆಯಿಂದ ಇತರ ಅನೇಕ ಮದಗಳಿಗೂ ಬಾಳಿನಲ್ಲಿ ಪ್ರವೇಶಕ್ಕೆ ರಾಜಮಾರ್ಗವಾಗುತ್ತದೆ. ಒಂದೊಂದು ಮದವಿದ್ದಾಗಲೇ ಮನುಷ್ಯನನ್ನು ತಡೆಯುವುದು, ಎದುರಿಸುವುದು ಕಷ್ಟವೆಂದ ಮೇಲೆ, ಸುರಾಪಾನಮತ್ತ ಮಾನವನ ಇತರ ಮದಗಳನ್ನು ಮೆಟ್ಟಿನಿಲ್ಲುವುದು ಎಷ್ಟು ಕಷ್ಟಸಾಧ್ಯ ಎಂಬುದನ್ನು ಯೋಚಿಸಬೇಕು. ಧನ ಮದ ಯವ್ವನ ಮದ ಅಧಿಕಾರ ಮದ ಇತ್ಯಾದಿ ಹಲವು ಹನ್ನೊಂದು ಮತ್ತು ಮನುಷ್ಯನ ಬಾಳಿನಲ್ಲಿ ಅವನ ಆತ್ಮಕ್ಕೆ ಅವರೋಧವನ್ನುಂಟುಮಾಡಿ ದೇಹವನ್ನು ಸೆಳೆದು, ಇಂದ್ರಿಯಗಳನ್ನು ವಶಪಡಿಸಿಕೊಂಡು ಅಂಧತಮಸ್ಸಿಗೆ ನೂಕುವಂತಹವು. ಅವೆಲ್ಲವನ್ನೂ ಗೆಲ್ಲುವಂತಾಗಬೇಕು, ಎಂದರೆ ಅದಕ್ಕೆ ಅವನೇ ಶಕ್ತಿ ನೀಡಬೇಕು. ಈ ಗೆಲುವಿನ ಶಕ್ತಿ ಶ್ರೀವೆಂಕಟೇಶ್ವರಸ್ವಾಮಿ ನೀಡಲಿ ಎಂದು ಬೇಡುವ ವಿನಯ ಇದ್ದಾಗಲೇ ಇದು ಸಾಧ್ಯ. ಇಲ್ಲದಿದ್ದಲ್ಲಿ ನಾನೆಂಬ ಮತ್ತು ಹಿಡಿದೀತು ಎಂಬ ಎಚ್ಚರ ವಿರಬೇಕು.

* * * * *

# ಹರಿಹರನ ಪುಷ್ಪರಗಳೆ

---ಡಾ. ಉಪ್ಪಂಗಳ ರಾಮಭಟ್ಟ.

ಮಹಾತ್ಮ್ಯಜ್ಞಾನ ಪೂರ್ವಸ್ತು
ಸುದೃಢಃ ಸರ್ವತೋಧಿಕಃ
ಸ್ನೇಹೋ ಭಕ್ತಿರಿತಿ ಪ್ರೋಕ್ತಃ
ತಯಾ ಮುಕ್ತಿರ್ನಚಾನ್ಯಥಾ

ಭಗವಂತನ ಮಹಿಮೆ, ಅದ್ಭುತ ಶಕ್ತಿಯನ್ನರಿತು ಶಿವನಲ್ಲಿ ಮನಸ್ಸನ್ನು ಗಟ್ಟಿಯಾಗಿ, ಕದಲದಂತೆ ತೊಡಗಿಸಿ ಉಳಿದೆಲ್ಲವನ್ನು ಮರೆತು ಅಂದರೆ ಎಲ್ಲ ದಕ್ಕಿಂತ ಹೆಚ್ಚಾಗಿ ತೋರತಕ್ಕ ಸ್ನೇಹವೆಂಬ ಮಾನಸಿಕ ಕ್ರಿಯೆ 'ಭಕ್ತಿ' ಯೆಂದು ಭಕ್ತವರೇಣ್ಯರು ಆಚಾರ್ಯ ಮಧ್ವರು ಸಾರಿದ್ದಾರೆ, ಒಂದೇ ಕಡೆಯಲ್ಲಿ ಮನ ಸ್ಸನ್ನು ತೊಡಗಿಸುವ ಪ್ರಕ್ರಿಯೆಯನ್ನು ಹಲವು ವಿಷ ಯಗಳಲ್ಲಿ, ಹಲವು ಸಂದರ್ಭಗಳಲ್ಲಿ ಮನುಷ್ಯನು ತೋರಬಹುದು. ಇದು ಭಗವಂತನನ್ನು ಕುರಿತ ದ್ದಾದರೆ ಮಾತ್ರ ಅದಕ್ಕೆ 'ಭಕ್ತಿ' ಯೆಂದು ಹೆಸರು. ಬೇರೆ ಬೇರೆ ಕಡೆಗಳಲ್ಲಿ ಅದಕ್ಕೆ ಹೆಸರು ಬೇರೆ. ಇದು ಗಂಡ--ಹೆಂಡತಿಯರೊಳಗಾದರೆ ಪ್ರೇಮ, ತಾಯಿ, ತಂದೆ ಮೊದಲಾದ ಹಿರಿಯರಿಗೆ, ಕಿರಿಯ ರಲ್ಲಾದರೆ 'ವಾತ್ಸಲ್ಯ', ಆತ್ಮೀಯ ಗೆಳೆಯರೊಳಗೆ ಮೈತ್ರಿ. ವಿದ್ಯಾರ್ಥಿಯೊಬ್ಬ ತನ್ನ ಅಧ್ಯಯನ ವಿಷ ಯದಲ್ಲಿಡುವ ಅಖಂಡ ಶ್ರದ್ಧೆಯೂ ಸಂಶೋಧಕ ನೊಬ್ಬ ತನ್ನ ಸಂಶೋಧನ ವಿಷಯದಲ್ಲಿ ತೋರುವ ನಿರಂತರ ತಲ್ಲೀನತೆಯೂ ಇದರದೇ ಒಂದು ರೂಪ. ಈ ಮಾನಸಿಕ ಕ್ರಿಯೆ ಉಳಿದ ಎಲ್ಲಾ ವಿಷಯಗ ಳಿಂದ ಸಂಸಾರಿಕ ಸಾಮಾಜಿಕ ಲೌಕಿಕಗಳಿಂದ ಬಿಡು ಗಡೆಯನ್ನು ಕೊಡುತ್ತದೆಂಬುದರಲ್ಲಿ ಸಂದೇಹವಿಲ್ಲ. ಮೋಕ್ಷವೆಂದರೆ ಕೇವಲ ಪರಲೋಕ ಸಂಬಂಧಿಯಾ ಗಿತೆ 'ಬಿಡುಗಡೆ' ಎಂಬ ಸಾಮಾನ್ಯ ಅರ್ಥವನ್ನು ಭಾವಿಸಬಹುದು. ಸಾಹಿತ್ಯಾದಿ ಕಲೆಗಳಲ್ಲಿ ಏಕೀಭ ವಿಸಿ ಉಳಿದೆಲ್ಲವನ್ನೂ ಮರೆತು ಪಡೆಯುವ ಆನಂದ ಬ್ರಹ್ಮಾನಂದ ಸಹೋದರ ಎಂದಿರುವುದು ಇದೇ ಅರ್ಥದಲ್ಲಿ. ಲೌಕಿಕವಾದ ಎಲ್ಲಾ ಕಷ್ಟಗಳಿಗೂ ಪರಿ ಹಾರ ಭಗವಂತನ ಭಕ್ತಿ ಎಂಬುದು ಈ ಹಿನ್ನೆಲೆ ಯಲ್ಲೂ ಸರಿಹೋಗುತ್ತದೆ.

ಭಕ್ತಿಪಂಥ ಭಾರತದಾದ್ಯಂತ ಬೆಳೆದು ಬಂದಷ್ಟು ಬೇರೆಡೆಯಲ್ಲಿ ಕಂಡುಬರುವುದಿಲ್ಲ. ಭಾರತದ ವಿವಿಧ ಭಾಷೆಗಳಲ್ಲಿ ಭಕ್ತಿಯಿಂದ ಹುಟ್ಟಿಕೊಂಡ ಅಪಾರ ಸಾಹಿತ್ಯವಿದೆ. ಹಿಂದಿ ಸಾಹಿತ್ಯ ಚರಿತ್ರೆಯ ಒಂದು ಘಟ್ಟವನ್ನು 'ಭಕ್ತಿಕಾಲ' ಎಂದೇ ಕರೆಯಲಾ ಗಿದೆ. ಭಾರತೀಯ ಸಂಗೀತದೊಳಗಣ ಹೆಚ್ಚಿನ ಸಾಹಿತ್ಯವಿಡೀ ಭಕ್ತಿವಾಹಿನಿ. ಸಂತರು ಬೇರೆ ಬೇರೆ ಭಾಷೆಗಳಲ್ಲಿ ಸಂಗೀತ ಸಾಹಿತ್ಯಗಳ ರೂಪದಲ್ಲಿ ಭಕ್ತಿ ಯನ್ನು ಭಗವಂತನ ಮೇಲಿನ ತಮ್ಮ ಅನನ್ಯ ಮಾನ ಸಿಕ ಎರಕವನ್ನು ವ್ಯಕ್ತಪಡಿಸಿದ್ದಾರೆ. ಕರ್ನಾಟಕದಲ್ಲಿ ವೀರಶೈವರು ಮುಖ್ಯವಾಗಿ 'ವಚನ'ಗಳಲ್ಲಿ, ಹರಿದಾ ಸರು ಕೀರ್ತನೆಗಳಲ್ಲಿ ತಮ್ಮ ಭಕ್ತಿವಾಹಿನಿಯನ್ನು ಹರಿ ಸಿದ್ದಾರೆ. ವೀರಶೈವ ಪಂಥದ ಬಸವಣ್ಣ, ಅಕ್ಕಮ ಹಾದೇವಿ ಮೊದಲಾದವರು ವಚನಗಳ ರೂಪದಲ್ಲಿ ತಮ್ಮ ಭಕ್ತಿ ಸ್ತೋತ್ರವನ್ನು ಹರಿಸಿದರೆ ಹರಿಹರ ರಾಘ ವಾಂಕ ಮೊದಲಾದವರು ಕಾವ್ಯರೂಪದಲ್ಲಿ ತಮ್ಮ ಭಕ್ತಿ ಸುಧೆಯನ್ನು ಹರಿಸಿದ್ದಾರೆ.

ಹರಿಹರಕವಿ ತನ್ನನ್ನು 'ಶಿವಕವಿ', "ವಿರೂಪಾಕ್ಷ ಸಾಕ್ಷಾತ್ ಸುಪುತ್ರಂ" ಎಂದು ಕರೆದುಕೊಂಡು ಶಿವನಿಗೆ ತನ್ನ ನಾಲಗೆಯನ್ನು ಮಾರಿಕೊಂಡವನು. ಭಕ್ತಿಯೇ ಇವನ ಸಾಹಿತ್ಯದ ಜೀವಾಳ. ಭಕ್ತರ ಚರಿ ತ್ರೆಯೇ ಇವನ ಕಾವ್ಯವಸ್ತು. ವೀರಶೈವ ಸಂತರ ಕುರಿತು ರಗಳೆ ಛಂದಸ್ಸಿನಲ್ಲಿ, ಕಾವ್ಯರಚನೆ ಮಾಡಿದ್ದ ಲ್ಲದೆ ತನ್ನ ಅನನ್ಯ ಶಿವಭಕ್ತಿಯನ್ನು "ಪುಷ್ಪರಗಳೆ" ಯಲ್ಲಿ ತೋಡಿಕೊಂಡಿದ್ದಾನೆ. ಹರಿಹರನು ತನ್ನ ಆರಾಧ್ಯದೇವ ಶಿವನಿಗೆ ಅರ್ಪಿಸಿದ ಭಕ್ತಿ ಪುಷ್ಪಾಂ ಜಲಿ ಪುಷ್ಪರಗಳೆ. ಪ್ರಾತಃಕಾಲದಲ್ಲಿ ಶುಚಿರ್ಭೂ ತನಾಗಿ ಉಪವನದಲ್ಲಿ ಹೂಗಳನ್ನಾಯ್ದು ಭಗವಂ ತನಿಗೆ ಅರ್ಪಿಸಿ ಅವನೊಡನೆ ತಲ್ಲೀನತೆಯಿಂದ ಸಂಭಾವಿಸಿ ತಾನು ಅನುಗ್ರಹೀತನಾದೆನೆಂದು ಹಿಗ್ಗಿ ನಲಿದು ಸಂತಸ ಪಡುವ ಅವನ ಭಕ್ತಿಯ ಪರಾ ಕಾಷ್ಠೆ ಇವರಲ್ಲಿ ಚಿತ್ರಿತವಾಗಿದೆ. ಅವನು ಆಯುವ ಅವನ ವಿವಿಧ ಹೂಗಳ ಪರಿಚಯ ಆಶ್ಚರ್ಯಕರ ವಾದುದು.

ಆರಂಭದ ಕಂದ ಪದ್ಯದಲ್ಲಿ, ಅಗಜಾಲೋ ಲನಲ್ಲಿ 'ಪುಷ್ಪರಗಳೆ'ಯೆಂಬ ಹೊಸಹೂಮಾಲೆ



ಯನ್ನು ಅವಧರಿಸೆಂದು ಕೇಳಿಕೊಳ್ಳುತ್ತಾನೆ, ಕವಿ. ಹೊಸಹೂಗಳಿಂದ ಅರ್ಚಿಸಲು ಭಗವಂತನ ಅನುಮತಿಯನ್ನು ಕೇಳಿಕೊಂಡ ಈ ಕವಿ ಮುಂಜಾವದಲ್ಲೆದ್ದು ಭಸಿತೋದ್ಧೂಳತನದಿಂದ ಪವಿತ್ರಗಾತ್ರನಾಗಿ ಕೈಯಲ್ಲಿ, ಹೂಗಳ ಪರಿಮಳಗಾಳಿಗೆ ಹಾರಿಹೋಗದಂತೆ ತುಂಬಿಸಲು ಒತ್ತಾಗಿ ನೇಯ್ದ, ಕರಡಿಗೆಯಂತಹ ಬುಟ್ಟಿಯನ್ನು ಹಿಡಿದುಕೊಂಡು ಶಿವನ ಶಿವಭಕ್ತರ ಗೀತಗಳನ್ನು ಹಾಡಿ ಆನಂದಭರಿತನಾಗಿ ರೋಮಾಂಚನಗೊಳ್ಳುತ್ತಾ ಸುಗಂಧಮಯವಾದ ಹೂದೋಟಕ್ಕೆ ಬರುತ್ತಾನೆ.

ಸುಂದರ ಹೂಗಳ ನೋಟ ಮತ್ತು ಪರಿಮಳಗಳಿಂದ ಉತ್ಸಾಹ ಮೀರಿ ಉದ್ದಕ್ಕೂ ಅಡ್ಡಕ್ಕೂ ಕುಣಿದಾಡಿ ತನ್ನ ದೇವರ ಪೂಜೆಗೆ ಇಷ್ಟೊಳ್ಳೆ ಹೂಗಳು ದೇಕಾದಷ್ಟುವೆಯಲ್ಲಾ ಎಂದು ನಲಿದು ಕೊಂಡಾಡುತ್ತಾನೆ. ಮೊದಲು ಅವನ ಕಣ್ಣಿಗೆ ಬಿದ್ದುದ್ದು ಪವಿತ್ರ ಪತ್ರ ಸಂದೋಹ -- ದೆಲ್ಗವತ್ತ, ಉತ್ತರಣೆ, ಕಕ್ಕೆ, ಬಿಳಿಯಕ್ಕೆ, ರುದ್ರ ಜಟೆ, ತುಂಬೆ, ಕಂಚಿವಾಳ, ಭದ್ರಮುಖಿ ಮೊದಲಾದುವುಗಳು. ಪತ್ರಗಳಾದರೇನು? --ಅವುಗಳೂ ದೇವನಿಗೆ ಅರ್ಪಿತವಾಗತಕ್ಕವೇ -- "ಪತ್ರಂ ಪುಷ್ಪಂ ಫಲಂ ತೋಯಂ" --ಅಲ್ಲವೇ? ಪತ್ರಗಳನ್ನು ಕಂಡು ನೀವು ಈಗ ಹೀಗೆ-ಇರಿ (ಬಹುಶಃ ಆಮೇಲೆ ನೋಡೋಣ ಎಂದು) ಎಂದು "ದೊಡ್ಡ ಪತ್ರಕ್ಕೆ" ನಮಸ್ಕರಿಸಿ ಹೂದೋಟಕ್ಕೆ ಮುನ್ನುಗ್ಗುತ್ತಾನೆ. ದೇವನಿಗೆ ಸುಂದರ, ಪರಿಮಳದ ಹೂಗಳೇ ಮೊದಲು ಆಗಬೇಕು ಎಂಬಲ್ಲಿ ಅವನ ಪುಷ್ಪಪ್ರೇಮ ಸೌಂದರ್ಯ ಪ್ರಜ್ಞೆಗಳನ್ನು ಗಮನಿಸಬಹುದು. ದೇವನಿಗೆ ಕೊಡುವ ಹೂಗಳ ಗಂಧ ಸೌಂದರ್ಯಗಳನ್ನು ಅವನ ಮನಸ್ಸೂ ಎಂಜಲಿಸಬಾರದು. ಅವೆಲ್ಲವೂ ಹೊಚ್ಚಹೊಸತಾಗಿ ಭಗವಂತನಿಗೇ ಅರ್ಪಿತವಾಗಬೇಕು. ಇಷ್ಟೊಳ್ಳೆ ಹೂಗಳನ್ನು ಭಗವಂತನಿಗೆ ಅರ್ಪಿಸುವ ಸೌಭಾಗ್ಯ ತನಗೊದಗಿತಲ್ಲಾ ಎಂದು ಮಿತಿಮೀರಿದ ಅವನ ಹಿಗ್ಗು ಅನನ್ಯ. ಇನ್ನೂ ತುಂಬಿ ಎಂಜಲಿಸದ, ಗಾಳಿ ಸೋಂಕದ, ಸೂರ್ಯಕರ ಸ್ಪರ್ಶವೂ ಆಗದ ಅತ್ಯಂತ ಪರಿಶುದ್ಧ, ಯಾವ ರೀತಿಯಲ್ಲೂ, ಸೆಕೆಂಡ್ ಹ್ಯಾಂಡ್ ಆಗದ ಹೂವೇ ಆಗಬೇಕು, ಅವನ ಭಗವಂತನಿಗೆ, ಅಷ್ಟು ಪರಿಶುದ್ಧನಲ್ಲವೇ ಅವನು ? "ಅಳಿಯೆರಗದ, ಅನುನಲುಗದ, ರಷಿಕರಂಪುಗದ ಮಘಮಘಿಸುವ" ಹೂ, -- ಅಂತಹ ಹೂವನ್ನು ತಾನಾಗಿ -- ಹೋಗಿ ಆಕ್ರಮಿಸಿ ಕೊಯ್ಯಲಾರ ಈ ಭಕ್ತ. ದೇವನಿಗಾಗಿಯಾದರೂ ಕೋಮಲ ಕುಸುಮದ ಮನನೋಯಿಸಬಾರದಷ್ಟೆ ? ಆ ಇರುವಂತಿಯ ಬಳಿಸಾರಿ "ತನಿಗಂಪುತಾವಿದ ಹೊಸಹೂಗಳನ್ನು ನೀಡೇ" ಎಂದು ಅನುಮತಿ ಕೇಳಿ ಹೂ ಪಡೆಯುತ್ತಾನೆ, ಹೂಗಿಡಗಳಲ್ಲೂ ಕವಿತೋರುವ ಮಾನವೀಯತೆ "ಸರ್ವತ್ರ ಸಮದರ್ಶನ" ಅವನ ಹೃದಯ ವೈಶಾಲ್ಯವನ್ನು ತೋರುತ್ತದೆ. ಭಗವಂತನ ಪೂಜೆಗಾಗಿ ಮಾತ್ರ ಅವನು ಹೂ ಕೊಯ್ಯುವವನೇ ಹೊರತು ಸುಮ್ಮನೇ ಕೊಯಿದು, ಸ್ವಾರ್ಥಕ್ಕಾಗಿ ಬಳಸಿ ಗಿಡವನ್ನು ನೋಯಿಸುವ ಕ್ರೂರನಲ್ಲ. ಪಕ್ಕದಲ್ಲೇ ಸಂಪಗೆಯನ್ನು ಕಂಡಾಗ "ಹೂ--ಕೀಳುವವನು ಎಂತಹ ಕೆಟ್ಟ -- ಮನಸ್ಸಿನವನೆಂದು ಬಗೆಯದೇ ಏನಮ್ಮಾ ಶಿವನ ಸಿರಿಮುಡಿಗಾಗಿ ಹೊಸ ಹೂಗಳನ್ನು ಕೊಡುವೆಯೊ ಕೊಡು" ಎಂದು ವಿನಯದಿಂದ ಪ್ರಾರ್ಥಿಸುತ್ತಾನೆ. ಅದನ್ನು ತೆಕ್ಕೊಂಡಾಗ ಸೇವಂತಿಗೆ ಕಾಣುತ್ತಾಳೆ. ಇನ್ನು ಚೆನ್ನಲ್ಲವೇ ಅವಳು? ಬಿಡುತ್ತಾನೆಯೇ? "ದೇವರ ದೇವನ ಜಡೆಮುಡಿಗಾಗಿ ಹೂನನೀಯಪ್ಪಾ" ಎಂದು ಬಿನ್ನವಿಸಿದಾಗ ನಿರಾಕರಿಸುವಳೇ ಅವಳು? ಶಿವನಿಗಲ್ಲವೇ ? ಕೊಟ್ಟಿಕೊಡುತ್ತಾಳೆ. ಮತ್ತೆ ಮುಂದೆ ಮಲ್ಲಿಗೆ ಮಾಧವಿಗಳನ್ನು ಕೊಂಡು ದಾಟಿ ಅದಿರ್ಗಂತಿಯಲ್ಲಿ 'ಮಾಸಲ ಸುಗಂಧ ಕುಸುಮವನು ಕೊಟ್ಟು ನನ್ನನ್ನು ಬದುಕಿಸು' ಎಂದು ದೈನ್ಯದಿಂದ ಕೇಳಿದಾಗ ಅವಳೂ ಇಲ್ಲವೆನ್ನುವಳೇ? ಮತ್ತೆ ಪುಷ್ಪ ಜಾತಿಯಲ್ಲೇ ಉತ್ತಮ ಜಾತಿ ಎಂದು ಹೆಸರಾದ 'ಜಾತಿ' (ಜಾಜಿ)ಯನ್ನು ಕಂಡು ನಿನ್ನ ಜಾತಿ ಸಾರ್ಥಕವಾಗಬೇಕಾದರೆ ಶಿವನ ಮುಡಿಗೇರಬೇಕೆಂದು ಹೊಗಳಿ ಗೆಲ್ಲುತ್ತಾನೆ ಅವಳ ಮನವನ್ನು. ಹೂಗಳ ಮನವೊಲಿಸಿಯೇ ಪಡೆಯುತ್ತಾನೆ. ಅವುಗಳನ್ನು, ಬಲತ್ಕಾರದಿಂದಲ್ಲ, ಏಕೆಂದರೆ ಅವು ಶಿವನಿಗಾಗಿ, ಪರರ ಮನನೋಯಿಸುವುದನ್ನು ಶಿವನು ಮೆಚ್ಚನು! ಮುಂದೆ ಮಘ ಮಘಿಸುವ ಕೇದಗೆ! ಹಾ! ಇದು ಅಕ್ಕಕ್ಕು! ಹೊರಗೆ ಮುಳ್ಳಾದರೂ ಒಳಗಂತಹ ಕಂಪು! ಇದು ಪೆರೆ ಮುಡಿದ ಶಿವನ ಗುಪ್ತಭಕ್ತರ ಪರಿಯೇ, ಲೇಸು, ಇಂಥವರೇ ದೇಕಲ್ಲವೇ ಶಿವನಿಗೆ. ಆಡಂಬರವನ್ನಲ್ಲ, ಗುಣವನ್ನು ಮೆಚ್ಚುವವನು ಶಿವ.

ಪರಿಮಳದ ಹೂ ಮಾತ್ರವಲ್ಲ, ದೇರಾದರೂ ಶಿವನಿಗರ್ಪಿತವಾಗಬೇಕು. ಮುಡಿವಾಳವೇ -- ದೇರರಿತವರಿಗೆ ಎಲೆತೋರುವುದೇಕೆಂದು ಮುಡಿವಾಳದ ದೇರನ್ನು ಕೊಂಡು ಪರಿಮಳದ ಹಬ್ಬವಾದ ದವನವನ್ನು ಬಾರೆಂದು ಕರೆದು ಕೇತಕಿ, ಪಡ್ಡಳಿ, ಬಿಳಿಕತ್ತುರಿ, ಹೇರೀಳೆ, ಮೊಲ್ಲೆಗಳನ್ನು ಮುದ್ದಾಡಿ ತಿರುಗಿ ನೋಡಿದಾಗ ಮರುಗವು ತಾನಾಗಿ ಕರೆಯುತ್ತಿದ್ದಾಗ, "ಹರನೇ ಮರೆತೇ ಬಿಟ್ಟೆನೇ! (ತಾನು ಮರೆತದ್ದಲ್ಲ, ತನ್ನ ಅರಿವು ಮರೆವು ಎಲ್ಲ ಹರನದ್ದೇ ಎಂಬ ಏಕೀಭಾವನೆ ಜತೆಗೆ ಹರ ಎಂಬ ಹೆಸರು ಕವಿಗೂ ಅನ್ವಯವಾಗುವುದನ್ನು ಗಮನಿಸಬಹುದು) ಈ ಪರಿಮಳದ ಸಸಿಯನ್ನು!" ಎಂದು ಆ ಹೂವನ್ನು ತೆಗೆದುಕೊಳ್ಳುತ್ತಾನೆ. ಮತ್ತೆ ಪರಿಮಳದ ಅರಸಿ ಸುರಹೊನ್ನೆಯನ್ನು ಮಾತನಾಡಿಸುತ್ತಾನೆ -- ಪುಲಿಗೆರೆಗೆ ಮೊದಲು ಸೋಮಯ್ಯನನ್ನು ಬರಿಸಿಕೊಂಡವಳು ನೀನೆ, ನಿನ್ನಂತಹ ಭಕ್ತರುಂಟೆ? ಬಾಯೆಂದು ಅವನ್ನು ಸೇರಿಸಿಕೊಂಡಾಗ ಅವನ ಆನಂದಕ್ಕೆ ಪಾರವಿಲ್ಲ. ನನ್ನ ದೆಂತಹ ಭಾಗ್ಯ! ಎಂತಹ ಪುಣ್ಯ! ಇಂತಹ ಹೂಗಳಿಂದರ್ಚಿಸುವ ಯೋಗ ತನಗೊದಗಿತಲ್ಲಾ ಎಂದು ಶಿವನನ್ನು ಸಿಂಗರಿಸುವ ವಿಶೇಷ ಕುಸುಮಗಳಿಗಾಗಿ ಹೂಗೊಳಕ್ಕೆ ಬರುತ್ತಾನೆ. "ಕಮಲವೇ ಹರಿಗೆ ಚಕ್ರವನ್ನಿತ್ತ ಶಿವನ ಪದ ಕಮಲ ಸೇರುವುದೇ ನಿನಗುಚಿತ"ವೆಂದು ಅದನ್ನು ಕೊಂಡು, "ನೆಯ್ದಿಲೇ ನೀನು ಶಿವನಲ್ಲಿಗೆಯ್ದಲೇ ಬಯಸುವಿಯಲ್ಲ, ನಿನ್ನನ್ನು ಅಲ್ಲಿ ಗೊಯ್ದರೆ ನನ

ಗೇನು ಲಂಚಕೊಡುವೆ" ಎಂದು, "ಲಿಂಗಕ್ಕೆ ಪ್ರಿಯವಾದ ಚೆಂಗಣಗಿಲೇ ಶಿವನಂಘ್ರಿಯನ್ನು ಸಿಂಗರಿಸುವೆ"ನೆಂದು ಕೊಳದ ನೀರಲ್ಲಿ ಹೋಗಿ ನಿಂತಾಗ ಆ ಹೂಗಳೆಲ್ಲಾ, ಅವನ ಕೈಗೆ ತಾವಾಗಿ ಬಂದುವು. ಇನ್ನೆಷ್ಟೋ ಹೆಸರರಿಯದ ಕಂಪುಳ್ಳ ಹೂಗಳಿವೆ, ಅವುಗಳ ಹೆಸರೇಕೆ ಪರಿಮಳವೇ ಸಾಕೆಂದು ಅವುಗಳನ್ನು ಕೊಂಡನು; ಹೂಗಳು ತಾವಾಗಿ ತಮ್ಮನ್ನು ಭಗವಂತನಿಗೆ ಅರ್ಪಿಸುವುದು, ಹೆಸರೇಕೆ ಪರಿಮಳವಿದ್ದರೆ ಸಾಕು ಎನ್ನುವುದು, ಹರಿಹರನ ಸ್ವಂತಗುಣ, ಅದನ್ನೆ ಅವನು ಹೂಗಳಲ್ಲಿ ಕಂಡಿದ್ದಾನೆ ಎನ್ನಿಸುವುದಿಲ್ಲವೆ?

ಈ ಹೂಗಳನ್ನೆಲ್ಲಾ ಕೊಂಡು ನಿರ್ಮಲವಾದ ಬಾಲಚೂತದ ಅಡಿಗೆ ಬರುತ್ತಾನೆ ಕವಿ. ಬಾಳೆಲೆ ಕಮಲದೆಲೆಗಳನ್ನು ಚಂದ್ರಕಾಂತ ಶಿಲಾತಲದ ಮೇಲೆ ಹಾಸಿ ಆ ಪರಿಮಳದ ಪಾತ್ರಗಳೆನಿಸಿದ ಹೂಗಳನ್ನೆಲ್ಲಾ ಜಾಗ್ರತೆಯಿಂದ ಸುರಿದು ಮೃಣಾಲ ಸೂತ್ರದಿಂದ ಹೂಮಾಲೆಯನ್ನು ಪೋಣಿಸುತ್ತಾನೆ, ಮಾಲೆ ಕಟ್ಟುವಾಗಲೂ ಏನು ಎಚ್ಚರ ! ಹೂವಿಗಾಗಲೀ ಪರಿಮಳಕ್ಕಾಗಲೀ ಕುಂದುಂಟಾಗಬಾರದಷ್ಟೆ? ಹೂವಿಗೆ ಘಾಸಿಯಾಗಬಾರದೆಂದು ಮುಟ್ಟಿಯೂ ಮುಟ್ಟದಂತೆ ಬಹು ಜಾಗ್ರತೆಯಿಂದ ಮುಟ್ಟುತ್ತಾನೆ. ಎಲ್ಲಾದರೂ ಹೂವೊಂದು ಕೈತಪ್ಪಿ ಬಿದ್ದರೆ ತಾನೇ ಸತ್ತಂತಾಗಿ ಮತ್ತೆ ಅದನ್ನು ಎತ್ತಿಕೊಂಡಾಗ ಹುಟ್ಟಿದಂತೆ ಅಂದುಕೊಳ್ಳುತ್ತಾನೆ. ಹೂ ಕೈಜಾರಿ ಬಿದ್ದರೆ, ಅವನಿಗೆ ಅಷ್ಟೂ ದುಃಖ, ನೋಡಿದರೇ ಬಾಡುವುದೋ ಎಂದು ಕಣ್ಣುಮುಚ್ಚಿಕೊಳ್ಳುತ್ತಾನೆ. ಕಣ್ಣು ತಾಗಬಾರದಲ್ಲಾ ದೇವನಿಗರ್ಪಿತವಾಗುವ ಹೂವಿಗೆ! ಹೂವನ್ನು ತಾನು ಮನಸ್ಸಿನಲ್ಲಿ ಎಣಿಸಿದರೇ ಕುಂದುವುದೋ ಎಂಬಷ್ಟು ಎಚ್ಚರ, ಅಷ್ಟುಎಚ್ಚರದಿಂದ ಹೂಗಳನ್ನು ಹಿಡಿದು ಒಂದೊಂದಾಗಿ ಪೋಣಿಸಿ ಮಾಲೆ ನೇಯುತ್ತಾನೆ, ಕೈಯಲ್ಲಿ ಹಿಡಿದು ಅದನ್ನು ತೂಗಿ ತೊನೆದು ಮೆಚ್ಚಿ ಪೋಣಿಸುವ ಆನಂದವೇ ಆನಂದ. ಆ ಹೂ ಅರಳುವ ಮೊದಲೇ, ತನ್ನ ಮನವರಳಿ ಹಿಗ್ಗುತ್ತಾನೆ. ಹೂಗಳ ಜೇನು ಹೀರುವುದಕ್ಕಾಗಿ ತೋಟಕ್ಕೆ ಬಂದ ಆರಡಿಗಳು ಗಿಡಗಳಲ್ಲಿ ಹೂ ಕಾಣದೆ ಪರಿಮಳದ ದಾರಿ ಹಿಡಿದು ಕವಿ ಮಾಲೆಮಾಡುವಲ್ಲಿಗೆ ಹಲ್ಲು ಕಡಿದುಕೊಂಡು ಸಿಟ್ಟಿನಿಂದ ಬರುತ್ತವೋ ಎಂಬಂತೆ ಝೇಂಕರಿಸಿಕೊಂಡು, ಬರುತ್ತವೆ. ಈ ಅಳಿಗಳಿಗೆ ಅಳಿಯಾಸೆದೇಡ, ಹಂಡೆಯರಸನ ಕುಮಾರ ಈ ಜಬರದಸ್ತಿಗೆಲ್ಲಾ ಅಂಜುವವನಲ್ಲ, ಗಳಗಳನೆ ಬಂದಂತೆ ಗಳಗಳನೆ ಮರಳಿರೆಂದು ಗದರಿಸಿದರೂ ಅವು ತೊಲಗದಾಗ ಇವುಗಳಿಗೆ ದೇಕಾದ ಬಗೆ ಮಾಡುತ್ತೇನೆ ಎಂದು ಸಂಪಗೆ ಹೂಗಳನ್ನು ಬೀಸಿದಾಗ ತಾಳಲಾರದೆ ತುಂಬಿಗಳು ಸರಿದು ಹೋದುವು. (ಸಂಪಗೆ ಹೂ ತುಂಬಿಗಳ ವಿರೋಧಿಯೆಂದು ಗೊತ್ತು ಹರಿಹರನಿಗೆ) ಕೊಯಿದು ತಂದ ಹೂವಿಗೆ ತುಂಬಿ ಎರಗುವುದು, ಅದನ್ನೋಡಿಸುವುದು -- "ಅಳಿಗಳೆರಗದ ಹೂ" ವಿನ ಕಲ್ಪನೆಗೆ ಹೆಚ್ಚು ಬಲ ನೀಡುತ್ತದೆ. ಹಾಗೆ ತುಂಬಿಗಳನ್ನಟ್ಟಿ ಕಟ್ಟಿದ ಹೂವೊಂದೂ ಅಲುಗಾಡದಂತೆ ಬಹಳ ಮೃದುವಾಗಿ ಹಿಡಕೊಂಡು ಶಿವನೆರಮನೆಗೆ ಬಂದು ಅವನಿಗೆಚ್ಚರವಾಗುವವರೆಗೆ ಕಾಯುತ್ತಾನೆ, ತಂದೆ ಶಿವನೇ ಎಚ್ಚರಗೊಂಡೆಯಾ? ಏಕೆ ತಡವಾಯಿತೆಂದುಕೊಂಡೆಯಾ? ಎಂದು, ತುಂಬಿ ಎರಗದ, ಗಾಳಿಯೂ ಸೋಂಕದ ಅಚ್ಚ ಹೊಸಹೂಗಳನ್ನು ತಂದೆಗೆಂದು ಹತ್ತಿರಕ್ಕೆ ಬಂದು ಹೂಗಳ ಸಾಮಾಗ್ರಿಯಿಂದಲೇ ಶಿವನನ್ನು ಸಿಂಗರಿಸುತ್ತಾನೆ. (ನಸುಕಿನಲ್ಲೇ ಎದ್ದು ಹೊಸ ಹೂಗಳನ್ನು ಕೊಯ್ಯಲು ಉದಾಸೀನ ಮಾಡಿ ಹಿಂದಿನ ಹೂಗಳನ್ನೆ ಕೊಯ್ದಿಟ್ಟಿದ್ದ ಯಕ್ಷನು ಅನುಭವಿಸಿದ ಶಾಪವನ್ನಲ್ಲಿ ನೆನೆಯಬಹುದು.) ಸೇವಂತಿಯ ಹನಿನೀರಿನಿಂದ ಶಿವನ ಮುಖ ತೊಳೆದು ಹೂವಿನ ಪರಾಗದಿಂದ ತಿಲಕ ವಿಡುತ್ತಾನೆ. ಶಿವನ ಸಿಕ್ಕುಗಟ್ಟಿದ ಮುಡಿಯನ್ನು ಸಡಿಲಿಸಲು ಬಾಚಣಿಗೆ ಎಲ್ಲಿ? ಸೂಜಿ ಹಲ್ಲುಗಳ ಸಾಲಿರುವ ಕೇವಣಿಯಿಂದಲೇ ಶಶಿಕಳೆಗೆ ನೋವಾಗದಂತೆ, ಸುರನದಿ ತುಳುಕಿ ಚೆಲ್ಲದಂತೆ ಜಡೆಯ ಸಿಕ್ಕನ್ನು ಬಿಡಿಸಿ ಪಡ್ಡಳಿಯ ಪರಿಮಳವನ್ನೆ ಕಸ್ತುರಿಯನ್ನಾಗಿ ಲೇಪಿಸುತ್ತಾನೆ, ಇರುವಂತೆ ಸೇವಂತಿಗಳನ್ನು ಮುಡಿಸುತ್ತಾನೆ, ಶಿವನ ಎಲ್ಲಾ ಅಂಗಾಂಗಳಿಗೂ ಅಲಂಕಾರಗಳಿಗೂ ಹೂಗಳೇ, ಇರುವಂತಿಯ ಕಂಠಮಾಲೆ, ದುಂಡು ಮಲ್ಲಿಗೆಯೇ ಪದಕ, ಚಂದನ ಲೇಪನಕ್ಕೆ ಮಲ್ಲಿಗೆ, ಕಸ್ತುರಿ ಲೇಪನಕ್ಕೆ ಜಾಜಿ. ಮಾಧವಿಯ ಉಂಗುರ, ಮರುಗದ ಗಜಚರ್ಮ ಹೊದಿಕೆ, ಹಂಡಗೆಯ ಪುಲಿದೊವಲುಡುಗೆ, ಸುರಹೊನ್ನೆಯ ಉರಗ ಕಂಕಣ, ಕಾಲಿಗೆ ಮಣಿಕರ್ಣಿಕೆಯ ಉಂಗುರ, ಪಾದಗಳಿಗೆ ಕಮಲಗಳ ಅರ್ಪಣೆ, ಉಳಿದ ಹೂಗಳೆನ್ನೆಲ್ಲಾ ಬಲಿಯಾಗಿ ಅರ್ಪಿಸುತ್ತಾನೆ. ಆಯಾ ಆಭರಣಗಳ ಆಕಾರವನ್ನು ಹೋಲುವ ಹೂಗಳಲ್ಲಿ ಕವಿಯ ಔಚಿತ್ಯಪ್ರಜ್ಞೆ, ದೇವನಿಗೂ, ಮಾನವೀಯ ಅಲಂಕಾರ ಮೆಚ್ಚುವಂತಹುದು. ದವನದಿಂದ ಸೀಗುರಿಯ ಗಾಳಿ ಸೇವೆ, ಮುಡಿವಾಳದಿಂದ ಚಾಮರಸೇವೆ, ರಣ ಧೂಪ ಧೂಮದ ಆರತಿ, ದೇವಾನ್ನ ದಿವ್ಯಾನ್ನದ ನೈವೇದ್ಯ.

ಇಂತಹ ಭಕ್ತಿ -- ತಲ್ಲೀನತೆಯ ಪೂಜೆ ಮಾಡಿದ ಭಕ್ತನ ಶಿವಸುಖದ ಪರಿಯನ್ನು ವಣಿಸುವುದು ಅಸಾಧ್ಯ. ಪರಮಾತ್ಮನನ್ನು ಕೊಂಡಾಡಿ ಕುಣಿದಾಡಿದ ಈ ಮುಕ್ತಿಸುಖದ ಎದುರಿನಲ್ಲಿ ಪುರುಷವೂ ಸುರಭಿಯೋ ಕಲ್ಪವೃಕ್ಷವೋ ಅಮೃತವೋ - - ಯಾವುದು ಸರಿ? ಇವುಗಳೆಲ್ಲಾ ನಿಸ್ಸಾರ, ನೀರಸ. ಇವನ್ನೆಲ್ಲಾ ಎಸೆದು ಚೆಲ್ಲಬೇಕು. ಈ ಪರಮಾನಂದ, ಸುಖದ ಸುಧೆ ತಲೆಗೇರಿ ಸೊಕ್ಕಿದ ಭಕ್ತಕವಿಗೆ 'ವಿರೂಪಾಕ್ಷ' ಎಂಬ ಹೆಸರಿನ ಒಂದೊಂದು ಅಕ್ಷರವೂ ಸುಖಮಯ, ಕೊನೆಯ ಅಕ್ಷರದ ಉಚ್ಚಾರಣೆಯೊಂದಿಗೆ ಸಂಪೂರ್ಣ ತನ್ನತನದ ಮರೆವು ಆನಂದ ಸುಖದ ತಲ್ಲೀನತೆಯಲ್ಲಿ 'ವಿರೂಪಾಕ್ಷ' ಹೆಸರಿನ ಉಚ್ಚಾರಣೆಯೇ ಗದ್ಗದಿತನಾಗಿ ವಿವಿ ರೂರೂ ಪಾಪಾ ಕ್ಷಕ್ಷ ಎಂದಾಗ ಬೇಕಿದ್ದರೆ ಆ ಭಕ್ತಿಯ ಪರಾಕಾಷ್ಠೆಯ ನೆಲೆಯೆಂತಹದು? ಆ ನಾಲ್ಕಕ್ಷರಗಳ ತೊದಲಿಕೆಯಲ್ಲಿ ಅರಿಷಡ್ವರ್ಗ, ತಾಪತ್ರಯ ಎಲ್ಲಾ ಸರಿದು ಹೋಗಿ ಮನಸ್ಸು ಎರಡಿಲ್ಲ, ಒಂದೇ ಎನಿಸುತ್ತದೆ. ಅವನ ಸರ್ವಾಂಗವೂ ತಾನೇ, ತಾನೇ ಅವನಾಗುತ್ತಾನೆ. ಈ ತನ್ನನ್ನು ತಾ ಮರೆದು ಭಗವಂತನಲ್ಲಿ ಒಂದಾಗುವುವನ್ನು ತನಗೆ ಕರುಣಿಸಬೇಕೆಂಬುದೇ ಮತ್ತೆ ಭಕ್ತನ ಬೇಡಿಕೆ.

ಸದ್ಭಕ್ತನ -- ಪೂಜೆಯೆಂದರೆ ಇಂತಹದು, ಭಗವಂತನಲ್ಲಿ ತಾನು ಲೀನವಾಗುವುದು, ಇದೇ ಮೋಕ್ಷ? ಇಲ್ಲೇ ಮೋಕ್ಷ, ಅವನಲ್ಲಿ ತನಗಿರುವ ಪ್ರೀತ್ಯಾದರಗಳ ದ್ಯೋತಕವಾಗಿ, ಆ ಗುಣವುಳ್ಳ ಹೂಗಳು ಮಾತ್ರ ಪೂಜೆಗೆ, ಹೂಗಳು ಸೌಂದರ್ಯ ಸುಗಂಧಪೂರಿತ -- ಶಿವನೂ ಸತ್ಯಸುಂದರ. ಮನವನ್ನೆ ಸುಮನದ ರೂಪದಲ್ಲಿ ಹರನಿಗರ್ಪಿಸಿದ್ದಾನೆ ಹರಿಹರ. ಅವನ ಅರ್ಪಣೆಯಲ್ಲಿ ಕಪಟವಿಲ್ಲ, ಆಡಂಬರವಿಲ್ಲ, ಎಲ್ಲವೂ ಸಹಜ, ಸ್ವಚ್ಛ, ಸ್ಫಟಿಕದಂತೆ ಪರಿಶುದ್ಧ, ಅಲಂಕಾರ ಅನುಲೇಪನ ಉಡುಗೆ ತೊಡುಗೆ ಎಲ್ಲವೂ ಹೂಗಳಿಂದಲೇ. ಮನಸ್ಸೊಂದಿದ್ದರೆ ದೇರೇನು ಬೇಕು? ಚಿನ್ನ ಬೆಳ್ಳಿಗಳ ಆಭರಣಗಳಿಲ್ಲ? ಇಲ್ಲಿ ಕಳ್ಳರ ಭಯವಿಲ್ಲ. ಕಂಚು ಪಿತ್ತಾಳೆಗಳ ಹಗರಣವಿಲ್ಲ, ಪಟ್ಟೆಪೀತಾಂಬರಗಳ ಪಾಲುಗಳಿಗೆ, ಮಡಿಮೈಲಿಗೆಗಳಿಗೆಡೆಯಿಲ್ಲ. ಪಂಚಭಕ್ಷ್ಯ ಪರಮಾನ್ನಗಳೂ ಇಲ್ಲ. ಗಂಟೆ, ಡೋಲು, ವಾದ್ಯ ಬಾಜಾ -- ಬಜಂತ್ರಿಗಳ ಘೋಷ ಗದ್ದಲಗಳಿಲ್ಲ, ಕೀರ್ತನೆಗಳ ಕೂಗಾಟವಿಲ್ಲ. ಎಲ್ಲವೂ ಮೌನ, ಮೌನದಲ್ಲೇ ಸ್ಮರಣೆ, ಪ್ರಾರ್ಥನೆ, ದೇವನೊಂದಿಗೆ ಸಂಭಾಷಣೆ, ಐಕ್ಯ. ಭಗವಂತನಲ್ಲೇ ಸರ್ವಸ್ವವನ್ನೂ ಕಂಡು ತನ್ನನ್ನೆ ಅವನನ್ನಾಗಿಸುವ ಹರಿಹರನ ಸರ್ವೋತ್ಕೃಷ್ಟ ಗುಪ್ತ ಭಕ್ತಿಗೆಣೆಯಿಲ್ಲ, ಆಡಂಬರದ ಭಕ್ತರಿಗೆ ಈ ಆದರ್ಶ, ಮನವೊಪ್ಪುವುದೆ? ಅವನ ಪುಷ್ಪಾಂಜಲಿ ಇಂದಿಗೂ ಪ್ರಸ್ತುತ ವೆನಿಸುವುದಿಲ್ಲವೇ?





# ತಿ. ತಿ. ದೇವಸ್ಥಾನಗಳು, ತಿರುಪತಿ.
# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

### ಕನ್ನಡ:

ಶ್ರೀನಿವಾಸನ ಹಾಡುಗಳು-ಭಾಗ-೨ (ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಕನಕದಾಸರು) ೪-೫೦
ಸೃಷ್ಟಿಪ್ರಕರಣ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ) -ವಿ. ಬಾದರಾಯಣ ಮೂರ್ತಿ ೧೨-೫೦
ಪುರಂದರೋಪನಿಷತ್ (ಪುರಂದರದಾಸರ ಏಳು ಕೃತಿ ವಿವರಣೆ) -ಬನ್ನಂಜೆ ಗೋವಿಂದಾಚಾರ್ಯ ೭-೦೦
ಕೇಶವಾದಿ ರೂಪಗಳು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) -ಸಂ. ಕೆ. ಅಪ್ಪಣ್ಣಾಚಾರ್ಯ ೩-೭೫
ಕರ್ನಾಟಕ ಹರಿದಾಸರು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) - ಸಂ. ಕೆ. ಅಪ್ಪಣ್ಣಾಚಾರ್ಯ ೨-೨೫
ಸ್ತೋತ್ರ ಕುಸುಮಮಾಲಾ -ಸಂ. ವೆಂಕಟಾಚಲ ೩-೦೦
ಆಚಾರಗಳು ಆಡಂಬರಗಳು -ಕೆ. ಚಂದ್ರಮೌಳಿ ೦-೪೦
ಶ್ರೀ ವೆಂಕಟೇಶ್ವರ ಸುಪ್ರಭಾತ (ವಿವರಣೆ ತಾತ್ಪರ್ಯ) ೦-೫೦
" " (ಕನ್ನಡ ಲಿಪಿಯಲ್ಲಿ) ೦-೧೨

### ಮಕ್ಕಳಿಗಾಗಿ:

ಶ್ರೀಪಾದರಾಜರು -ಎಂ. ಎಸ್. ಗುಂಡೂರಾವ್ ೦-೭೫
ಮಹಿಪತಿದಾಸರು -ಶಾನಭಾಗ ೦-೮೫
ಪ್ರಸನ್ನ ವೆಂಕಟದಾಸರು -ವಿ. ಬಾದರಾಯಣಮೂರ್ತಿ ೦-೮೦
ಗೋಪಾಲದಾಸರು -ರುಕ್ಮಿಣಿಗಿರಿಮಾಜಿ ೦-೭೫

### ಹಿಂದಿ:

ಶ್ರೀ ವೆಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ -ಡಾ. ಎಂ. ಸಂಗಮೇಶಂ ೦-೨೦
ಶ್ರೀ ವೇಂಕಟೇಶ್ವರ ಸುಪ್ರಭಾತ್ (ಸಚಿತ್ರ) ೧೧-೦೦
ತೀರ್ಥರಾಜ ತಿರುಪತಿ -ಡಾ. ಎಂ. ಸಂಗಮೇಶಂ ೧-೫೦

### ಸಂಸ್ಕೃತ:

ಶ್ರೀ ವೇಂಕಟೇಶ್ವರ ಸುಪ್ರಭಾತಂ ೦-೧೨
ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾಣಿ ೦-೬೨
ಕಠೋಪನಿಷತ್ -ಡಾ. ಕೆ. ಸಿ. ವರದಾಚಾರಿ ಹಾಗೂ ಡಾ. ಡಿ. ತಾತಾಚಾರ್ಯ ೧೫-೦೦
ಮಾರ್ಕಂಡೇಯ ಸಂಹಿತಾ ೧೮-೦೦
ತತ್ತ್ವಸಂಖ್ಯಾನಂ -ಆರ್. ರಾಮಮೂರ್ತಿ ಶರ್ಮಾ ೨-೦೦
ಬ್ರಹ್ಮಸೂತ್ರ ಭಾಷ್ಯ (ಭಾಗ-೧) -ಆರ್. ರಾಮಮೂರ್ತಿ ಶರ್ಮಾ ೩೦-೦೦
ಅಲಂಕಾರ ಸಂಗ್ರಹ ಸಂ-ಕೆ. ಭಾಸ್ಕರರಾವ್ ೧೬-೦೦
ಸೀತಾರಾಮಾಂಜನೇಯಂ -ಡಾ. ಡಿ. ಅರ್ಕಸೋಮಯಾಜಿ ೫೦-೦೦
ಪ್ರಶ್ನೋಪನಿಷತ್ ೧೧-೦೦
ಶ್ರೀಮತ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರಃ -ಸಂ-ಡಾ. ಎಸ್. ಬಿ. ರಘುನಾಥಾಚಾರ್ಯ ೨೫-೦೦

೧೦೦೦ ರೂಗಳನ್ನು ಮೀರಿದ ಪುಸ್ತಕಗಳ ಕೊಳ್ಳುವಿಕೆಗೆ ೩೦ಶತಾಂಶ ರಿಯಾಯಿತಿಯೂ, ೫೦೦ ರೂಗಳಿಂದ ೧೦೦೦ ರೂ.ವರೆಗೆ ೨೫ಶತಾಂಶ ರಿಯಾಯಿತಿಯೂ, ೧೦೦ ರೂ.ಗಳಿಂದ ೫೦೦ ರೂ.ವರೆಗೆ ೧೫ಶತಾಂಶ ರಿಯಾಯಿತಿಯೂ ಉಂಟು.

ಅಂಚೆವೆಚ್ಚ ಪ್ರತ್ಯೇಕ.

ಕೂಡಲೇ ಬರೆಯಿರಿ.

ಸೇಲ್ಸ್‌ವಿಂಗ್ ಆಫ್ ಪಬ್ಲಿಕೇಷನ್ಸ್,
ತಿ. ತಿ. ದೇ. ತಿರುಪತಿ.

# ದ್ವಾದಶ ಜ್ಯೋತಿರ್ಲಿಂಗಗಳು

---ರಘುಸುತ.

ಭಾರತದಲ್ಲಿ ಅನೇಕ ಶಿವದೇವಾಲಯಗಳಿವೆ. ಇವುಗಳಲ್ಲಿ ಹನ್ನೆರಡು ತುಂಬಾ ಮುಖ್ಯವಾದುವು. ಇವನ್ನು 'ದ್ವಾದಶ ಜ್ಯೋತಿರ್ಲಿಂಗಗಳು' ಎಂದು ಕರೆಯುತ್ತಾರೆ. ಇವಷ್ಟೂ ಸ್ವಯಂಭು ಲಿಂಗಗಳು. ಅಂದರೆ ಪರಶಿವನು ತಾನೇ ಸ್ವತಃ ಲಿಂಗರೂಪದಲ್ಲಿ ಉದ್ಭವವಾಗಿ ತನ್ನ ಆತ್ಮಲಿಂಗವನ್ನು ಅಲ್ಲಿ ಪ್ರತಿಷ್ಠಾಪಿಸಿದ ಎನ್ನುವ ಭಾವ. ಆತನ ಹೃದಯವೇ ಆತ್ಮಲಿಂಗ. ಇದನ್ನು ಪೂಜಿಸುವವರು ಬಹಳ ಬೇಗ ಪರಮಾತ್ಮನ ಅನುಗ್ರಹಕ್ಕೆ ಪಾತ್ರರಾಗುವರು ಎಂಬ ನಂಬಿಕೆ. ಅದರಿಂದಲೇ ಜ್ಯೋತಿರ್ಲಿಂಗಗಳು ಇಷ್ಟೊಂದು ಶ್ರೇಷ್ಠತೆಯನ್ನು ಪಡೆದಿರುವುವು ಹಾಗೂ ಅನೇಕ ಶತಮಾನಗಳಿಂದ ಇವು ಪರಮಪವಿತ್ರ ಕ್ಷೇತ್ರಗಳಾಗಿರುವುವು. ಇವುಗಳ ಬಗ್ಗೆ ನಮ್ಮ ಪ್ರಾಚೀನ ಗ್ರಂಥಗಳಲ್ಲೂ ವಿವರಗಳಲಿವೆ. ಈ ಜ್ಯೋತಿರ್ಲಿಂಗಗಳು ಇರುವ ಪವಿತ್ರಕ್ಷೇತ್ರಗಳೆಂದರೆ--

೧. ಸೋಮನಾಥಪುರದಲ್ಲಿರುವ ಸೋಮನಾಥ.

೨. ಶ್ರೀ ಶೈಲದಲ್ಲಿರುವ ಮಲ್ಲಿಕಾರ್ಜುನ.

೩. ಉಜ್ಜಯಿನಿಯಲ್ಲಿರುವ ಮಹಾಕಾಳ.

೪. ಓಂಕಾರ್ ನಲ್ಲಿರುವ ಪರಮೇಶ್ವರ.

೫. ಹಿಮಾಲಯದಲ್ಲಿರುವ ಕೇದಾರೇಶ್ವರ.

೬. ಢಾಕಿನಿ ಕ್ಷೇತ್ರದಲ್ಲಿರುವ ಭೀಮಾಶಂಕರ.

೭. ಕಾಶಿಯಲ್ಲಿರುವ ವಿಶ್ವೇಶ್ವರ.

೮. ಗೌತಮಿ ತೀರದಲ್ಲಿರುವ ತ್ರ್ಯಂಬಕೇಶ್ವರ.

೯. ಚಿತಾಭೂಮಿಯಲ್ಲಿನ ವೈದ್ಯನಾಥ.

೧೦. ದಾರುಕಾವನದಲ್ಲಿರುವ ನಾಗೇಶ್ವರ.

೧೧. ಸೇತುಬಂಧನ ಪ್ರಾಂತ್ಯದ ರಾಮೇಶ್ವರ.

೧೨. ಶಿವಾಲಯ ಕ್ಷೇತ್ರದಲ್ಲಿರುವ ಘುಶ್ಮೇಶ್ವರ.

ಈ ಪುಣ್ಯಪ್ರದ ಜ್ಯೋತಿರ್ಲಿಂಗಗಳ ದರ್ಶನವು ಹಿಂದಿನ ಏಳೇಳು ಜನ್ಮಗಳ ಪಾಪವನ್ನು ದೂರಮಾಡುತ್ತದೆ. ಇವುಗಳ ವೈಭವ ಈ ರೀತಿ ಇದೆ :

## ೧. ಸೋಮನಾಥ ಜ್ಯೋತಿರ್ಲಿಂಗ :

ಗುಜರಾತ್ ರಾಜ್ಯದಲ್ಲಿನ ಕಾಥೇವಾಡ್ ವಿಭಾಗದಲ್ಲಿ ಅರಬ್ಬೀ ಸಮುದ್ರದ ತೀರದಲ್ಲಿ ಪ್ರಭಾಸ ಕ್ಷೇತ್ರದಬಳಿ ಸೋಮನಾಥಪುರವಿದೆ. ಇಲ್ಲಿ ಸೋಮನಾಥ. ಇದು ಅಶೇಷ ಪ್ರಖ್ಯಾತಿ ಪಡೆದ ಕ್ಷೇತ್ರವಾಗಿದೆ. ಇಲ್ಲಿ ಸೋಮನಾಥನ ರೂಪದಲ್ಲಿ ಪರಶಿವನ ಆತ್ಮಲಿಂಗವು ಪ್ರತಿಷ್ಠಾಪಿತವಾಗಿದೆ. ಸೋಮ ಎಂದರೆ ಚಂದ್ರ. ಚಂದ್ರನನ್ನು ಅನುಗ್ರಹಿಸಿದವನಾದುದರಿಂದ ಇಲ್ಲಿನ ಶಿವಲಿಂಗಕ್ಕೆ ಸೋಮನಾಥ ಎಂಬ ಹೆಸರಾಯಿತು.

ದಕ್ಷನು ತನ್ನ ಇಪ್ಪತ್ತೇಳು ಕುಮಾರಿಯರನ್ನು ಚಂದ್ರನಿಗೆ ನೀಡಿ ವಿವಾಹ ಮಾಡಿದ. ಆದರೆ ಅವರಲ್ಲಿ ರೋಹಿಣಿಯ ಮೇಲೆ ಚಂದ್ರನಿಗೆ ವಿಶೇಷ ಅನುರಾಗ. ಉಳಿದವರ ಬಗ್ಗೆ ಅನಾದರ. ಇದರಿಂದ ರೋಸಿಹೋದ ಅವರು ತಮ್ಮ ಪತಿಯ ಬಗ್ಗೆ ದಕ್ಷನಲ್ಲಿ ದೂರಿದರು. ಅದರಿಂದ ಆತನು ಚಂದ್ರನಿಗೆ ಎಚ್ಚರಿಕೆ ನೀಡಿದ. ಪ್ರಯೋಜನವಾಗಲಿಲ್ಲ. ಅದರಿಂದ ಕೋಪಗೊಂಡ ದಕ್ಷನು ಕ್ಷಯ ರೋಗಿಯಾಗುವಂತೆ ಚಂದ್ರನನ್ನು ಶಪಿಸಿದ. ಇದರಿಂದ ಖತಿಗೊಂಡ ಚಂದ್ರನು ಬ್ರಹ್ಮನನ್ನು ಕುರಿತು ತಪಸ್ಸು ಮಾಡಿದನು. ಆತನು ಚಂದ್ರನಿಗೆ ಪ್ರಭಾಸತೀರ್ಥ ಮೃತ್ಯುಂಜಯ ಮಂತ್ರವನ್ನು (ಶಿವ)ನ ಆರಾಧನೆಯನ್ನು ಮಾಡುವಂತೆ ಸೂಚಿಸಿ, ಮೃತ್ಯುಂಜಯ ಮಂತ್ರವನ್ನು ಉಪದೇಶಿಸಿದನು. ಇದರ ಸಹಾಯದಿಂದ ಚಂದ್ರನು ಕಠೋರ ತಪಸ್ಸು ಮಾಡತೊಡಗಿದನು. ಹತ್ತು ಕೋಟಿ ಪರ್ಯಾಯಗಳ ನಂತರ ಪರಶಿವನು ಸಂತುಷ್ಟನಾಗಿ ಚಂದ್ರನಿಗೆ ಅಮರತ್ವ ನೀಡಿ, ಹದಿನೈದು ದಿನಗಳವರೆಗೆ ಒಂದೊಂದು ಕಲೆ ತಗ್ಗುವಂತೆಯೂ, ಮತ್ತೆ ಹದಿನೈದು ದಿನ ಒಂದೊಂದು ಕಲೆ ವೃದ್ಧಿಯಾಗುವಂತೆಯೂ ಅನುಗ್ರಹಿಸಿದನು. ಇದರಿಂದ ಶುಕ್ಲ, ಕೃಷ್ಣ ಪಕ್ಷಗಳೂ, ಹುಣ್ಣಿಮೆ, ಅಮಾವಾಸ್ಯೆಗಳೂ ನಿರ್ಮಾಣವಾದುವು. ಚಂದ್ರನಿಗಾಗಿ ದಯಮಾಡಿಸಿದ ಭಗವಾನ್ ಪರಶಿವನನ್ನು ಅಲ್ಲಿಯೇ ನೆಲೆಸುವಂತೆ ದೇವತೆಗಳು ಪ್ರಾರ್ಥಿಸಿದ್ದರಿಂದ ಉಮಾಸಮೇತನಾಗಿ ಸೋಮನಾಥ ಜ್ಯೋತಿರ್ಲಿಂಗ ರೂಪದಲ್ಲಿ ಇಲ್ಲಿ ನೆಲೆಸಿದನು. ಈ ಜ್ಯೋತಿರ್ಲಿಂಗದ ಗರ್ಭಗುಡಿಯ ಕೆಳಗಡೆ ಗುಹೆ ಇದ್ದು, ಅದರಲ್ಲಿ ಸಾವಿರಾರು ವರ್ಷಗಳಿಂದ ಉರಿಯುತ್ತಿರುವ ದೀಪವೊಂದಿದೆ.

ಈ ಜ್ಯೋತಿರ್ಲಿಂಗದ ಸೇವೆಗೆ ಒಂದು ಸಾವಿರ ಅರ್ಚಕರಿದ್ದರು. ದೈವರಿಗೆ ನೈವೇದ್ಯ ಮಾಡುವ ಸಮಯದಲ್ಲಿ ಮೊಳಗಬೇಕಾದ ಬೃಹತ್ ಗಂಟೆಯ ಸರಪಳಿಯು ೨೦೦ ಮಣ ಬಂಗಾರದಿಂದ ನಿರ್ಮಿಸಲಾಗಿತ್ತು. ದೇವಾಲಯವೆಲ್ಲವೂ ಸ್ವರ್ಣಮಯವಾಗಿತ್ತು. ನವರತ್ನಗಳನ್ನು ಹುದುಗಿಸಿದ ೫೦ ಸ್ತಂಭಗಳಿದ್ದುವು. ಪ್ರತಿ ನಿತ್ಯವೂ ಗಂಗಾಜಲ ಹಾಗೂ ಕಾಶ್ಮೀರ ಪುಷ್ಪಗಳನ್ನು ಅಭಿಷೇಕಕ್ಕಾಗಿ ತರಿಸಲಾಗುತ್ತಿತ್ತು.

ಕ್ರಿ.ಶ ೧೦೨೫ ರಲ್ಲಿ ಮಹಮ್ಮದ್ ಘಸ್ನಿಯು ಇದರ ಮೇಲೆ ಮೊಟ್ಟಮೊದಲ ಧಾಳಿ ಮಾಡಿ, ಕೊಳ್ಳೆ ಹೊಡೆದ, ಕ್ರಿ.ಶ. ೧೩೦೦ ರಲ್ಲಿ ಅಲ್ಲಾವುದ್ದೀನ್ ಖಿಲ್ಜಿ; ೧೭೦೬ ರಲ್ಲಿ ಔರಂಗಜೇಬ್‌ರವರುಗಳು ವಿಧ್ವಂಸನ ಕಾರ್ಯವನ್ನು ಮುಂದುವರಿಸಿದರು. ೧೮೬೦ ರಲ್ಲಿ ಅಹಲ್ಯಾಬಾಯಿಯು ೨೦ ಅಡಿ ಆಳದಲ್ಲಿ ಹೂತು ಹೋಗಿದ್ದ ಜ್ಯೋತಿರ್ಲಿಂಗವನ್ನು ಮೇಲೆತ್ತಿಸಿ, ಪ್ರತಿಷ್ಠಾಪಿಸಿದಳು. ಭಾರತಕ್ಕೆ ಸ್ವಾತಂತ್ರ್ಯ ಬಂದ ಮೇಲೆ ಈ ದೇವಾಲಯವನ್ನು ಪುನರ್ ನಿರ್ಮಿಸಿ, ೧೯೫೧ ರಲ್ಲಿ ಲಿಂಗ ಪ್ರತಿಷ್ಠಾಪನಾ ಕಾರ್ಯ ನೆರವೇರಿತು.

ಇಲ್ಲಿನ ಸೋಮನಾಥನಂತೆ ಪೂರ್ವ ಬಂಗಾಳಾದ ಚಿಟ್ಟಿಗಾಂಗ್‌ನಿಂದ ೩೫ ಮೈಲಿ ದೂರದಲ್ಲಿ ಬೆಟ್ಟವೊಂದರ ಮೇಲೆ ಚಂದ್ರನಾಥಲಿಂಗವಿದೆ. ಇದು ಹದಿಮೂರನೇ ಜ್ಯೋತಿರ್ಲಿಂಗವೆನ್ನುವರು. ಇದೇ ರೀತಿಯಲ್ಲಿ ಸೌರಾಷ್ಟ್ರದಲ್ಲಿ ಜಸದಣ ರಾಜ್ಯದಲ್ಲಿ ಭೇಲ್ ಗಂಗಾನದಿ ದಡದಲ್ಲಿ ಶೈಲ ಶಿಖರದ ಮಧ್ಯದಲ್ಲಿ ಶ್ರೀ ಭೇಲಾ ಸೋಮನಾಥನ ಪುನೀತ ವಿಗ್ರಹವಿದೆ. ಇದೂ ಒಂದು ಜ್ಯೋತಿರ್ಲಿಂಗವೆಂದೇ ಹೇಳಲಾಗುತ್ತದೆ.

## ೨. ಮಲ್ಲಿಕಾರ್ಜುನ ಜ್ಯೋತಿರ್ಲಿಂಗ :

ಆಂಧ್ರಪ್ರದೇಶದ ಕರ್ನೂಲ್ ಜಿಲ್ಲೆಯಲ್ಲಿ ನಲ್ಲಮಲೈ ಅರಣ್ಯಗಳಿಂದ ಆವೃತವಾದ ಶ್ರೀಶೈಲ ಪರ್ವತದ ಮೇಲೆ ಶ್ರೀಶೈಲಕ್ಷೇತ್ರವಿದೆ. ಇದಕ್ಕೆ ಕ್ರೌಂಚ ಪರ್ವತ ಎನ್ನುವ ಇನ್ನೊಂದು ಹೆಸರೂ

## ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

### ದರ್ಶನ ಹಾಗೂ ಸೇವಾ ವಿವಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ ೫-೦೦ | ಪ್ರಾ ೫-೩೦ |
| ವಿಶ್ವರೂಪ ಸರ್ವದರ್ಶನ* | ಪ್ರಾ ೫-೩೦ | ಪ್ರಾ ೭-೦೦ |
| ತೋಮಾಲ ಸೇವೆ (ಆರ್ಜಿತ) | ಪ್ರಾ ೭-೩೦ | ಪ್ರಾ ೮-೦೦ |
| ಅರ್ಚನೆ (ಆರ್ಜಿತ) | ಪ್ರಾ ೮-೦೦ | ಪ್ರಾ ೮-೩೦ |
| ಸರ್ವದರ್ಶನ | ಪ್ರಾ ೯-೦೦ | ಮ ೧೨-೩೦ |
| | ಮ ೧-೦೦ | ಸಂ. ೬-೦೦ |
| | ರಾ ೭-೦೦ | ರಾ ೮-೪೫ |
| ಏಕಾಂತಸೇವೆ | | ರಾ ೯-೦೦ಕ್ಕೆ |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ ೫-೩೦ ರಿಂದ ಪ್ರಾ ೬-೩೦ ರ ವರೆಗೆ ಮಾತ್ರ.

### ಆರ್ಜಿತ ಸೇವೆಗಳು

| | |
|---|---|
| ೧. ಗರುಡವಾಹನ | ೩೨-೦೦ |
| ೨. ಚಂದ್ರಪ್ರಭ ವಾಹನ | ೩೨-೦೦ |
| ೩. ಗಜವಾಹನ | ೩೨-೦೦ |
| ೪. ಅಶ್ವವಾಹನ | ೩೨-೦೦ |
| ೫. ಸಿಂಹವಾಹನ | ೩೨-೦೦ |
| ೬. ಹಂಸವಾಹನ | ೩೨-೦೦ |
| ೭. ಚಿಕ್ಕಶೇಷವಾಹನ | ೩೨-೦೦ |
| ೮. ದೊಡ್ಡ ಶೇಷವಾಹನ | ೬೨-೦೦ |
| ೯. ಸೂರ್ಯಪ್ರಭವಾಹನ | ೬೨-೦೦ |

### ಪಡಿಪ್ರಸಾದಗಳು

| | |
|---|---|
| ೧. ದೋಸೆ, ಕಾಲಸೋಲ | ೩೫-೦೦ |
| ೨. ದಧ್ಯೋದನ " | ೪೦-೦೦ |
| ೩. ಪುಳಿಯೋಗರೆ " | ೫೦-೦೦ |
| ೪. ಪೊಂಗಲು " | ೫೫-೦೦ |
| ೫. ಸಕ್ಕರೆಪೊಂಗಲ್ " | ೬೫-೦೦ |
| ೬. ಶಾಕರ ಭಾತ್ " | ೮೫-೦೦ |
| ೭. ಕೇಸರಿಭಾತ್ " | ೯೦-೦೦ |
| ೮. ಸೀರ " | ೧೫೫-೦೦ |

ವಿವರಗಳಿಗೆ:
**ಪೇಷ್ಕಾರ್**
ಶ್ರೀ ಗೋವಿಂದರಾಜಸ್ವಾಮಿ ದೇವಾಲಯ,
ತಿರುಪತಿ.

ಉಂಟು. ಇಲ್ಲಿನ ಪವಿತ್ರ ಜ್ಯೋತಿರ್ಲಿಂಗವನ್ನು 'ಮಲ್ಲಿಕಾರ್ಜುನ' ಎಂದು ಕರೆಯುತ್ತಾರೆ. ಇದರ ಬಗ್ಗೆ ಮಹಾಭಾರತ, ಶಿವಪುರಾಣ, ಪದ್ಮಪುರಾಣಗಳಲ್ಲಿ ವಿವರಗಳಿವೆ.

ಗಣಪತಿ, ಕುಮಾರಸ್ವಾಮಿಗಳ ನಡುವೆ ಯಾರು ಮೊದಲು ವಿವಾಹ ಮಾಡಿಕೊಳ್ಳಬೇಕೆಂಬ ಬಗ್ಗೆ ಸ್ಪರ್ಧೆ, ಗಣಪತಿಯು ತಂದೆ ತಾಯಿಯರ ಪ್ರದಕ್ಷಿಣೆ ಮಾಡಿ ವಿಶ್ವರೂಪ ಪ್ರಜಾಪತಿಯ ಕುಮಾರಿಯರಾದ ಸಿದ್ಧಿ, ಬುದ್ಧಿಯರನ್ನು ವಿವಾಹವಾಗುವುದು; ಹಿಂತಿರುಗಿ ಬಂದ ಕುಮಾರಸ್ವಾಮಿ ಕೋಪಗೊಂಡು ಕೈಲಾಸವನ್ನು ತ್ಯಜಿಸಿ, ಶ್ರೀಶೈಲದಲ್ಲಿ ಅಲೆದಾಡುವುದು, ಅವನ ತೃಪ್ತಿಗಾಗಿ ಆದಿದಂಪತಿಗಳು ಕುಮಾರಸ್ವಾಮಿಗಾಗಿ ಶ್ರೀಶೈಲದಲ್ಲೆ ಬಂದು ನೆಲಸುವುದು -- ಇತ್ಯಾದಿ ಕಥೆಗಳು ಈ ಕ್ಷೇತ್ರಕ್ಕೆ ಸಂಬಂಧಪಟ್ಟವುಗಳು. ಇದರಿಂದ ಶ್ರೀಶೈಲ ಶಿಖರ ದರ್ಶನವು ಕೈಲಾಸ ಶಿಖರದಷ್ಟೇ ಶ್ರೇಷ್ಠವೆಂದು ನಂಬಲಾಗಿದೆ.

ಶಿವರಾತ್ರಿಯ ಸಮಯದಲ್ಲಿ ಇಲ್ಲಿ ದೊಡ್ಡ ಜಾತ್ರೆ ನಡೆಯುತ್ತದೆ. ಆ ಸಮಯದಲ್ಲಿ ಶಿವದರ್ಶನವು ಪರಮಕಲ್ಯಾಣಕಾರಕವಾದುದು ಎಂಬ ನಂಬಿಕೆ.

ಆದಿ ಶಂಕರರು ಇದನ್ನು ದರ್ಶಿಸಿದ ಸಂದರ್ಭದಲ್ಲಿ 'ಶಿವಾನಂದಲಹರಿ' ಎನ್ನುವ ಪ್ರಖ್ಯಾತ ಶಿವಸ್ತುತಿಯನ್ನು ರಚಿಸಿದರು. ಬಳಿಯಲ್ಲಿ ಹರಿಯುವ ಕೃಷ್ಣಾ ನದಿಯನ್ನು ಇಲ್ಲಿ 'ಪಾತಾಳಗಂಗೆ' ಎಂದು ಕರೆಯುತ್ತಾರೆ.

## ೩. ಮಹಾಕಾಳ ಜ್ಯೋತಿರ್ಲಿಂಗ :

ಮಧ್ಯಪ್ರದೇಶದ ಮಾಳ್ವಾ (ಪೀಠಭೂಮಿ) ಪ್ರದೇಶದಲ್ಲಿ ಕ್ಷಿಪ್ರಾನದೀ ತೀರದಲ್ಲಿ ಉಜ್ಜಯಿನಿ ನಗರವಿದೆ. ಇದು ಭಾರತದ ಪ್ರಾಚೀನ ನಗರಗಳಲ್ಲಿ ಒಂದು, ಅಂತೆಯೇ ಪವಿತ್ರಕ್ಷೇತ್ರವೂ ಆಗಿದೆ. ಶಕಾರಿ ವಿಕ್ರಮಾದಿತ್ಯ ಮಹಾರಾಜನ ಅವಂತೀ ಸಾಮ್ರಾಜ್ಯಕ್ಕೆ ರಾಜಧಾನಿಯಾಗಿದ್ದ ಈ ನಗರದ ಹೆಸರು ಆಗ ಅವಂತೀನಗರ (ಅವಂತಿಕಾಪುರೀ) ಎಂದಾಗಿತ್ತು. ಈತನ ಹೆಸರಿನಲ್ಲೆ ಭಟ್ಟಿ ವಿಕ್ರಮಾದಿತ್ಯನ ಕಥೆಗಳು ಪ್ರಚಾರಕ್ಕೆ ಬಂದವು. ಖಗೋಳಶಾಸ್ತ್ರಜ್ಞ ವರಾಹಮಿಹಿರನು ಈ ನಗರದಲ್ಲೆ ಇದ್ದುದು. ಈತನ ನೆನಪಿಗಾಗಿ ಮಹಾರಾಜಾ ಜಯಸಿಂಹನು ನಕ್ಷತ್ರಪ್ರಯೋಗಾಲಯವನ್ನು ನಿರ್ಮಿಸಿದನು. ಬಳಿಯಲ್ಲೆ ಶ್ರೀಕೃಷ್ಣ, ಬಲರಾಮರು ವಿದ್ಯಾಭ್ಯಾಸ ಮಾಡಿದ ಸಂದೀಪ ಆಶ್ರಮವಿದೆ.

ಬುದ್ಧನು ಹುಟ್ಟುವುದಕ್ಕೆ ಮುಂಚೆನಿಂದಲೂ ಈ ನಗರ ಪ್ರಖ್ಯಾತವಾಗಿತ್ತು. ಸಾಮ್ರಾಟ್ ಅಶೋಕನು ಇಲ್ಲಿ ರಾಜ್ಯಪಾಲನಾಗಿದ್ದನು. ಇಲ್ಲಿನ ಮಹಾಕಾಳ ದೇವಾಲಯವು ಪ್ರಪಂಚದ ಅತ್ಯಂತ ವಿಶಾಲ ದೇವಾಲಯಗಳಲ್ಲಿ ಒಂದಾಗಿತ್ತು. ಇದು ಐದು ಮೈಲಿ ಉದ್ದ, ಐದು ಮೈಲಿ ಅಗಲವಾಗಿತ್ತು. ಪಾಳುಬಿದ್ದಿದ್ದ ಮೂಲದೇವಾಲಯವನ್ನು ಸಿಂಧ್ಯಾರಾಜರುಗಳು 'ಮಹಾಕಾಳ ದೇವಾಲಯ' ಎಂದು ಪುನಃ ನಿರ್ಮಾಣ ಮಾಡಿದರು. ಐದು ಅಂತಸ್ತುಗಳ ಈ ದೇವಾಲಯವು ನಗರದ ನೈರುತ್ಯ ದಿಕ್ಕಿನಲ್ಲಿದೆ, ದೇವಾಲಯದ ಸುತ್ತಲಿನ ಕೈಸಾಲೆಗಳಲ್ಲಿ ಹಳೆ ವಿಗ್ರಹಗಳು, ಶಿಲಾಫಲಕಗಳು ಇವೆ. ದೇವಾಲಯದ ಅಂತಸ್ತುಗಳು ಛೇದಿತ ಕಟಾಂಜನಗಳಿಂದ ಅಲಂಕೃತವಾಗಿದ್ದು ವಿವಿಧ ಕೆತ್ತನೆಗಳಿಂದ ಶೋಭಾಯಮಾನವಾಗಿವೆ. ಪ್ರಜಾಪೀಡಕನಾಗಿದ್ದ ದೂಷಣನೆಂಬ ರಾಕ್ಷಸನನ್ನು ಶಿವನು ಮಹಾಕಾಳ ರೂಪದಲ್ಲಿ ಪ್ರಕಟವಾಗಿ, ಅವನನ್ನು ಸಂಹರಿಸಿದ್ದರಿಂದ, ಮಹಾಕಾಳ ರೂಪವು ಪ್ರಖ್ಯಾತವಾಯಿತು. ಚಿತಾಭಸ್ಮ ವಿಭೂಷಿತನಾದ ಮಹಾಕಾಳೇಶ್ವರನನ್ನು ಶಿವರಾತ್ರಿಯಂದು ದರ್ಶಿಸಿದ್ದೇ ಆದರೆ ಜನ್ಮಜನ್ಮಾಂತರಗಳ ಪಾಪಗಳು ನಷ್ಟವಾಗುತ್ತದೆಯೆಂಬ ನಂಬಿಕೆ.

## ೪. ಓಂಕಾರೇಶ್ವರ ಜ್ಯೋತಿರ್ಲಿಂಗ ಅಮರೇಶ್ವರ ಜ್ಯೋತಿರ್ಲಿಂಗ :

ಮಧ್ಯಪ್ರದೇಶದ ಖಾಂಡ್ವಾ ಜಿಲ್ಲೆಯಲ್ಲಿ ನರ್ಮದಾ ನದೀತೀರದಲ್ಲಿ ಮಾಂಧಾತಾ ಪರ್ವತದ ಮೇಲೆ ಓಂಕಾರೇಶ್ವರ ಜ್ಯೋತಿರ್ಲಿಂಗವಿದೆ. ಇದು ನರ್ಮದೆಯ ಎರಡು ಬಾಹುಗಳ ನಡುವಣ ದ್ವೀಪದಲ್ಲಿದೆ. ದೋಣಿಯ ಮೂಲಕ ನರ್ಮದೆಯನ್ನು ದಾಟಿ, ಈ ದೇವಸ್ಥಾನವನ್ನು ತಲುಪಬೇಕು. ಇದರೊಂದಿಗೆ ಅಮಲೇಶ್ವರನ ಹೆಸರನ್ನೂ ತೆಗೆದುಕೊಳ್ಳಲಾಗುತ್ತದೆ.

ಒಮ್ಮೆ ಗೋಕರ್ಣದಲ್ಲಿ ಶಿವಾರಾಧನೆಯನ್ನು ಮುಗಿಸಿಕೊಂಡು ಹಿಂತಿರುಗುತ್ತಿದ್ದ ನಾರದನಿಗೆ ವಿಂಧ್ಯನು ಕಾಣಿಸಿದನು. ಅವನಿಗೆ ತುಂಬಾ ಅಹಂಕಾರವಿರುವುದನ್ನು ಕಂಡುಕೊಂಡ. "ಮೇರು ಪರ್ವತದ ಎದುರು ಇತರೇ ಪರ್ವತಗಳೆಲ್ಲಕ್ಕೆ ನೋಟ ವೇನೇ!" ಎಂದ. ಅಂತೆಯೇ ಮೇರುವನ್ನು ಮೀರಿಸುವಂತಾಗಲು ಪರಶಿವನನ್ನು ಕುರಿತು ತಪಸ್ಸು ಮಾಡಿದ. ಪರಶಿವನು ಪ್ರತ್ಯಕ್ಷನಾಗಿ ಅವನ ಇಷ್ಟದಂತೆ ಶಿವನ ಪವಿತ್ರಪಾದಗಳನ್ನು ವಿಂಧ್ಯನ ಮೇಲೆ ಇರಿಸಿದನು. ಪರಶಿವನ ಪಾದಸ್ಪರ್ಶವಾದ ಕೂಡಲೇ ವಿಂಧ್ಯನಿಗೆ ಜ್ಞಾನೋದಯವಾಯಿತು. ಅಂತೆಯೇ ಪರಮಾತ್ಮನು 'ಓಂಕಾರ' ಲಿಂಗನಾಗಿ, ಪ್ರಣವ ಸ್ವರೂಪಿಯಾಗಿ ವಿರಾಜಮಾನನಾದ.

ಕಾಲ ಉರುಳಿದಂತೆಲ್ಲ ಇಲ್ಲಿನ ದೇವಾಲಯವು ಶಿಥಿಲವಾಗಲು ಪೇಷ್ವೆ ಎರಡನೇ ಬಾಜೀರಾಯನು ಇಲ್ಲಿನ ದೇವಾಲಯವನ್ನು ಪುನರ್ನಿರ್ಮಿಸಿದನು. ಈ ಜ್ಯೋತಿರ್ಲಿಂಗದ ನಾಲ್ಕೆಸೆಗಳಲ್ಲೂ ನೀರು ತುಂಬಿದೆ ಹಾಗೂ ಪ್ರಾಕೃತಿಕ ರೂಪದಲ್ಲಿದೆ. ಬೆಟ್ಟಗುಡ್ಡಗಳಿಂದ ಆವೃತವಾದ ಈ ದೇವಸ್ಥಾನವು ಸಾಕ್ಷಾತ್ ಓಂಕಾರಸ್ವರೂಪದಂತೆ ದೃಷ್ಟಿಗತವಾಗುತ್ತದೆ.

## ೫. ಕೇದಾರೇಶ್ವರ ಜ್ಯೋತಿರ್ಲಿಂಗ :

ಉತ್ತರ ಪ್ರದೇಶದಲ್ಲಿ ಹಿಮಾಲಯ ಪರ್ವತ (ಉತ್ತರಖಂಡ)ದ ಸಾಲುಗಳ ನಡುವೆ ಕೇದಾರನಾಥ ಎನ್ನುವ ಶಿಖರವಿದೆ. ಸ.ಮ.ಕ್ಕಿಂ೧೧೭೫೫ ಅಡಿ ಎತ್ತರದಲ್ಲಿರುವ ಪರಶಿವನ ಈ ಜ್ಯೋತಿರ್ಲಿಂಗವು ವಿಶ್ವವಿಖ್ಯಾತವಾಗಿದೆ. ದೀರ್ಘ ತಪಸ್ಸು ಮಾಡಿದ ನರನಾರಾಯಣರಿಗೆ ಪರಮೇಶ್ವರನು ಪ್ರತ್ಯಕ್ಷನಾಗಿ ಕೇದಾರನಾಥನ ರೂಪದಲ್ಲಿ ಜ್ಯೋತಿರ್ಲಿಂಗವಾಗಿ ಆವಿರ್ಭವಿಸಿದನು. ಬೇರೆ ಬೇರೆ ಯುಗಗಳಲ್ಲಿ ಬೇರೆ ಬೇರೆ ಭಕ್ತರು ಈ ದೇವನನ್ನು ಆರಾಧಿಸಿ, ಕೃತಾರ್ಥರಾದರು. ಪರಮೇಶ್ವರನೊಂದಿಗೆ ನರನಾರಾಯಣರನ್ನೂ ಇಲ್ಲಿ ಪೂಜಿಸಬೇಕೆಂಬುದು ನಿಯಮ. ಮಹಾಭಾರತದ ಯುದ್ಧದ ನಂತರ ಬಂಧುಮಿತ್ರ, ಸಹೋದರರನ್ನು ಕೊಂದ ಪಾಂಡವರಿಗೆ ಮನಶ್ಶಾಂತಿ ಇರಲಿಲ್ಲ. ಅದಕ್ಕಾಗಿ ಅವರು ಕೇದಾರನಾಥ ಯಾತ್ರೆ ಕೈಗೊಂಡರು. ಮಧ್ಯದಲ್ಲಿ ಪರಮೇಶ್ವರನು ಮಹಿಷರೂಪ ಧರಿಸಿ ಓಡತೊಡಗಿದನು. ಪಾಂಡವರು ಅದನ್ನು ಹಿಂಬಾಲಿಸಿ, ಬಹಳ ದೂರ ಹೋದರು. ಕಡೆಗೆ ಅದರ ಬಾಲವನ್ನು ಹಿಡಿದುಕೊಂಡರು. ಕೂಡಲೇ ಅದು ಅವರ ಕೈಗೆ ಬಂದಿತು. ಈ ಬಾಲಭಾಗವೇ ಕೇದಾರೇಶ್ವರ ಜ್ಯೋತಿರ್ಲಿಂಗವಾಯಿತು. ಪಾಂಡವರು ಇದನ್ನೇ ಅರ್ಚಿಸಿದರು. ಉಳಿದ ದೇಹದೊಂದಿಗೆ ಮಹಿಷವು ನೇಪಾಳವನ್ನು ಪ್ರವೇಶಿಸಿ, ಪಾದವನ್ನು ತುಂಗನಾಥದಲ್ಲೂ, ಮುಖವ (ತತಿಯ)ನ್ನು ರುದ್ರನಾಥದಲ್ಲೂ, ಉದರಭಾಗವನ್ನು ಮಧ್ಯಮೇಶ್ವರದಲ್ಲೂ, ಜಟಿಗಳನ್ನು ಕಲ್ಲೇಶ್ವರದಲ್ಲಿಯೂ ವಿಸರ್ಜಿಸಿದತು. ಕೇದಾರದೊಂದಿಗೆ ಈ ನಾಲ್ಕೂ ಕ್ಷೇತ್ರಗಳನ್ನು ಸೇರಿಸಿ, ಪಂಚ ಕೇದಾರಗಳೆಂದು ಕರೆಯುತ್ತಾರೆ. ಈ ಐದೂ ಕೇದಾರಗಳ ದರ್ಶನದಿಂದ ಮಾನವನು ಪರಿಪೂರ್ಣ ವಿಮುಕ್ತಿಯನ್ನು ಪಡೆಯುವನೆಂಬ ನಂಬಿಕೆ.

ಕೇದಾರಕ್ಷೇತ್ರದಲ್ಲಿನ ದೊಡ್ಡ ಶಿಲೆಯ ರೂಪದ ಶಿವಲಿಂಗಕ್ಕೆ ತುಪ್ಪದಿಂದ ಅಭಿಷೇಕ ಮಾಡಿ, ಪೂಜಿಸುವರು. ಚಳಿಗಾಲದಲ್ಲಿ ಈ ದೇವಾಲಯವು ಹಿಮದ ಹೊದ್ದಿಕೆಯಿಂದ ಮುಚ್ಚಿರುವುದರಿಂದ ಕೆಳಹಿಮಾಲಯದಲ್ಲಿನ ಊಬಿ ಮಠದಲ್ಲಿ ಕೇದಾರೇಶ್ವರನ ಪೂಜೆಯು ನಡೆಯುವುದು.

## ಅ) ಭೀಮಾಶಂಕರ ಜ್ಯೋತಿರ್ಲಿಂಗ :

ಮಹಾರಾಷ್ಟ್ರದ ಪೂನಾದ ಉತ್ತರದಲ್ಲಿ ಸಹ್ಯಾದ್ರಿ ಪರ್ವತಶ್ರೇಣಿಗಳಲ್ಲಿನ ಭೀಮಾನದಿಯ ದಡದಲ್ಲಿ ಢಾಕಿನಿ ಪರ್ವತದ ಮೇಲೆ ಈ ಜ್ಯೋತಿರ್ಲಿಂಗವಿದೆ. ಇಲ್ಲಿನ ಶಿವಲಿಂಗದ ಮೇಲೆ ಸದಾ ಭೀಮಾನದಿಯ ನೀರು ಬೀಳುತ್ತಿರುತ್ತದೆ. ಈ ದೇವಸ್ಥಾನದ ಬಳಿ ಎರಡು ಕುಂಡಗಳಿವೆ. ಭಗವಾನ್ ಶಂಕರನು ತ್ರಿಪುರಾಸುರನನ್ನು ವಧಿಸಿದ ನಂತರ ಇಲ್ಲಿ ವಿಶ್ರಾಂತಿ ತೆಗೆದುಕೊಂಡ. ಆಗ ಇಲ್ಲಿ ಅವಧದೇಶದ ಭೀಮನೆಂಬ ರಾಜನು ತಪಸ್ಸು ಮಾಡುತ್ತಿದ್ದ. ಅವನ ತಪಸ್ಸಿಗೆ ಮೆಚ್ಚಿ, ಅವನಿಗೆ ದರ್ಶನ ನೀಡಿದನು. ಅದರಿಂದ ಇದು ಭೀಮಾಶಂಕರ ಜ್ಯೋತಿರ್ಲಿಂಗ ಎಂಬ ಹೆಸರು ಪಡೆಯಿತು.

## (ಆ) ಭೀಮಾ ಶಂಕರ (ಅಸ್ಸಾಂ)

ಅಸ್ಸಾಂನ ಕಾಮರೂಪ ಜಿಲ್ಲೆಯಲ್ಲಿನ ಗೌಹಾಟಿ ಬಳಿಯಲ್ಲಿನ ಬ್ರಹ್ಮಪುರದ ಬೆಟ್ಟದ ಮೇಲೆ ಭೀಮಾಶಂಕರ ಜ್ಯೋತಿರ್ಲಿಂಗವಿದೆ ಎಂದು ಹೇಳಲಾಗುತ್ತದೆ.

ಕುಂಭಕರ್ಣನಿಂದ ಕರ್ಕಟಿ ಎನ್ನುವವಳಲ್ಲಿ ಭೀಮಾಸುರನು ಜನಿಸಿ ಬ್ರಹ್ಮನನ್ನು ಕುರಿತು ತಪಸ್ಸು ಮಾಡಿ ಅಪಾರ ಶಕ್ತಿ, ಸಂಪತ್ತುಗಳನ್ನು ಪಡೆದನು. ಸ್ವರ್ಗವನ್ನು ಗೆದ್ದು, ಭೂಮಿಯ ಮೇಲಿನ ಎಲ್ಲ ರಾಜ, ಮಹಾರಾಜರನ್ನೂ ಜಯಿಸಿದನು. ಹೀಗೆ ಜಯಿಸಲ್ಪಟ್ಟವರಲ್ಲಿ ಕಾಮರೂಪ ರಾಜ್ಯದ ಸುದಕ್ಷಿಣನೂ ಒಬ್ಬನು. ಇವನನ್ನು ಕಾರಾಗೃಹದಲ್ಲಿ ಬಂಧಿಸಿ, ಶಿವಾರಾಧನೆಯನ್ನು ಮಾಡಕೂಡದೆಂದು ನಿರ್ಬಂಧಿಸಿದನು. ಆದರೆ ಸುದಕ್ಷಿಣನು ಇದನ್ನು ಧಿಕ್ಕರಿಸಿ, ಸದಾಶಿವ ಪೂಜೆಯಲ್ಲಿ ತಲ್ಲೀನನಾಗಿರುತ್ತಿದ್ದನು. ಒಮ್ಮೆ ಇದರಿಂದ ಕೋಪಗೊಂಡ ಭೀಮಾಸುರನು ಸುದಕ್ಷಿಣನನ್ನೂ, ಆತನು ಪೂಜಿಸುತ್ತಿದ್ದ ಶಿವಲಿಂಗವನ್ನು ಛಿದ್ರಮಾಡಲು ಕತ್ತಿಯನ್ನೆತ್ತಿದಾಗ ಪರಶಿವನು ಪ್ರತ್ಯಕ್ಷನಾಗಿ, ಆ ರಾಕ್ಷಸನನ್ನು ಸಂಹರಿಸಿದನು. ನಂತರ ಭಕ್ತರ ಬೇಡಿಕೆಯಂತೆ ಭೀಮಾಶಂಕರನಾಗಿ ನೆಲೆಗಿದ.

## ೭. ವಿಶ್ವೇಶ್ವರ ಜ್ಯೋತಿರ್ಲಿಂಗ (ಕಾಶಿ) :

ಉತ್ತರ ಪ್ರದೇಶದ ವಾರಣಾಸಿಯಲ್ಲಿ 'ವಿಶ್ವೇಶ್ವರ ಜ್ಯೋತಿರ್ಲಿಂಗ' ವಿದೆ. ಈ ಕಾಶಿ ನಗರವು ಪರಶಿವನ ಶಾಶ್ವತ ನಿವಾಸವಾಗಿದೆ. ವರುಣ, ಅಸಿ -- ಎನ್ನುವವು ಗಂಗಾನದಿಯ ಎರಡು ಉಪನದಿಗಳು. ಇವೆರಡರ ನಡುವೆ ಇರುವುದೇ 'ವಾರಣಾಸಿ' ಕ್ಷೇತ್ರ.

ಕಾಶಿಯು ಪ್ರಪಂಚದ ಅತ್ಯಂತ ಪ್ರಾಚೀನ ನಗರಗಳಲ್ಲಿ ಒಂದು. ಪ್ರಳಯವಾದಾಗ ಕಾಶಿ ನಗರವು ಪರಮೇಶ್ವರ ತ್ರಿಶೂಲದಲ್ಲಿದ್ದು, ನಂತರ ಸೃಷ್ಟಿಯ ಸಮಯದಲ್ಲಿ ಅದರಿಂದ ಕೆಳಗಿಳಿಸಲಾಗುವುದು. ಮಹಾವಿಷ್ಣುವು ಇಲ್ಲಿಯೇ ಯೋಗ ನಿದ್ರೆ ಮಾಡಿ, ಬ್ರಹ್ಮನ ಸೃಷ್ಟಿ ಮಾಡಿ, ತದನಂತರ ಆತನು ಪ್ರಪಂಚದ ಸೃಷ್ಟಿ ಮಾಡತೊಡಗುವನು.

ಸತೀದೇವಿಯ ಅವತಾರವಾದ ಕಾಶೀ ವಿಶಾಲಾಕ್ಷಿಯು, ಮತ್ತೊಂದು ರೂಪವಾದ ಅನ್ನಪೂರ್ಣಳಾಗಿ ಶಕ್ತಿಯು ಅವತಾರವಾಗಿ ಇಲ್ಲಿ ನೆಲೆಸಿರುವುದರಿಂದ ಭಾರತದ ೫೧ ಶಕ್ತಿ ಪೀಠಗಳಲ್ಲಿ ಇದೂ ಒಂದಾಗಿದೆ.

ಕಾಶಿಯಲ್ಲಿನ ಉತ್ತರದ ಕಡೆಗಿನ ಭಾಗವನ್ನು 'ಓಂಕಾರಖಂಡ' ಎಂದೂ, ದಕ್ಷಿಣದಲ್ಲಿರುವುದನ್ನು 'ಕೇದಾರ ಖಂಡ' ಎಂದೂ, ಇವೆರಡರ ನಡುವೆ ಇರುವುದನ್ನು 'ವಿಶ್ವೇಶ್ವರ ಖಂಡ' ವೆಂದೂ ಕರೆಯುತ್ತಾರೆ. ಈ ನಡುವಣ ವಿಶ್ವೇಶ್ವರ ಖಂಡದಲ್ಲಿ 'ವಿಶ್ವೇಶ್ವರ ಜ್ಯೋತಿರ್ಲಿಂಗ' ಇರುವುದು.

ಬ್ರಹ್ಮನ ಹತ್ತು ಅಶ್ವಮೇಧ ಯಾಗಗಳನ್ನು ಮಾಡಿದ ಸ್ಥಳವೇ ಕಾಶಿಯ 'ದಶಾಶ್ವಮೇಧ ಘಾಟ್'. ಇಲ್ಲಿ ಮಹಾವಿಷ್ಣು ತಪಸ್ಸು ಮಾಡುತ್ತಿದ್ದಾಗ, ಅದರಿಂದ ಆಶ್ಚರ್ಯಗೊಂಡ ಪರಶಿವನು ತಲೆಯನ್ನು ಒದರಿದಾಗ ಬಲಗಿವಿಯ ಆಭರಣವೊಂದು ಜಾರಿ ಇಲ್ಲಿ ಬಿದ್ದಿತು. ಇದೇ 'ಮಣಿಕರ್ಣಿಕಾ ಘಾಟ್'. ದಕ್ಷಯಜ್ಞದ ಸಮಯದಲ್ಲಿ ಪ್ರಾಣತ್ಯಾಗ ಮಾಡಿದ ಸತೀದೇವಿಯ ದೇಹವನ್ನು ಭುಜದ ಮೇಲೆ ಹೊತ್ತು ತಾಂಡವ ನೃತ್ಯ ಮಾಡುತ್ತಿದ್ದಾಗ ಆಕೆಯ ಕಿವಿಯ ಕುಂಡಲಗಳು ಇಲ್ಲಿ ಬಿದ್ದಿದ್ದರಿಂದ ಇದನ್ನು 'ಮಾಣಿಕರ್ಣಿಕಾ ಘಾಟ್' ಎಂದು ಕರೆಯುತ್ತಾರೆ ಎಂದೂ ಹೇಳಲಾಗುತ್ತದೆ.

ಕಾಶಿಯಲ್ಲಿ ವಿಶ್ವೇಶ್ವರ ಜ್ಯೋತಿರ್ಲಿಂಗದ ಜೊತೆಗೆ ೨೧ ಭವ್ಯದೇವಾಲಯಗಳಿದ್ದುವೆಂದು ಕ್ರಿ.ಶ. ೭ನೇ ಶತಮಾನದ ಚೈನಾ ಯಾತ್ರಿಕ ಹ್ಯೂಯೆನ್‌ತ್ಸಾಂಗ್ ತಿಳಿಸಿದ್ದಾನೆ.

ಧಾಳಿಗೆ ಬಲಿಯಾದ ದೇವಾಲಯಗಳಲ್ಲಿ ವಿಶ್ವೇಶ್ವರ ದೇವಾಲಯವೂ ಒಂದು. ಈ ದೇವಾಲಯವನ್ನು 'ಜ್ಞಾನವಾಪಿ ಆಲಯ' ಎಂದೂ ಕರೆಯುತ್ತಿದ್ದರು. ಧ್ವಂಸಮಾಡಿದ ನಂತರದಲ್ಲೆಲ್ಲ ಹಿಂದೂಗಳು ಇದನ್ನು ಪುನರ್ನಿಮಿಸುತ್ತಿದ್ದರು. ಕ್ರಿ.ಶ.



# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಶ್ರೀನಿವಾಸ ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ ೨ ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ -- ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ |
|---|---|---|
| ಸುಪ್ರಭಾತ | ಪ್ರಾ 5--00 ಪ್ರಾ 5--30 | ಪ್ರಾ 5--00 ಪ್ರಾ 5--30 |
| ವಿಶ್ವರೂಪ ಸರ್ವದರ್ಶನ | ಪ್ರಾ 5--30 ಪ್ರಾ 6--00 | ಪ್ರಾ 5--30 ಪ್ರಾ 6--00 |
| ತೋಮಾಲ, ಕೊಲುವು | | |
| ಪಂಚಾಂಗಶ್ರವಣ | ಪ್ರಾ 6--00 ಪ್ರಾ 6--30 | ಪ್ರಾ 6--00 ಪ್ರಾ 6--30 |
| ಸಹಸ್ರನಾಮಾರ್ಚನೆ | ಪ್ರಾ 6--30 ಪ್ರಾ 7--00 | ಪ್ರಾ 6--30 ಪ್ರಾ 7--00 |
| ಮೊದಲನೇ ಗಂಟೆ | ಪ್ರಾ 7--00 ಪ್ರಾ 7--30 | ಪ್ರಾ 7--00 ಪ್ರಾ 7--30 |
| ಸರ್ವದರ್ಶನ | ಪ್ರಾ 7--30 ಪ್ರಾ 10--00 | *ಅಭಿಷೇಕ ಪ್ರಾ 7--30 ಪ್ರಾ 8--30 |
| | | ಸಮರ್ಪಣ ಪ್ರಾ 8--30 ಪ್ರಾ 9--30 |
| 2ನೇ ಅರ್ಚನೆ | | |
| 2ನೇ ಗಂಟೆ | ಪ್ರಾ 10--00 ಪ್ರಾ 10--30 | ಪ್ರಾ 9--30 ಪ್ರಾ 10--30 |
| *ಆರ್ಜಿತ | | ಕಲ್ಯಾಣೋತ್ಸವ ಪ್ರಾ 10--30 ಮ 12--00 |
| ಸರ್ವದರ್ಶನ | ಪ್ರಾ 10--30 ಸಂ 6--30 | ಪ್ರಾ 10--30 ಸಂ 6--30 |
| ರಾತ್ರಿ ಕೈಂಕರ್ಯ | | |
| ರಾತ್ರಿ ಗಂಟೆ | ಸಂ 6--30 ರಾ 7--00 | ಸಂ 6--30 ರಾ 7--00 |
| ಸರ್ವದರ್ಶನ | ರಾ 7--00 ರಾ 8--45 | ರಾ 7--00 ಪ್ರಾ 8--45 |
| ಏಕಾಂತ ಸೇವೆ | ರಾ 8--45 ರಾ 9--00 | ರಾ 8--45 ರಾ 9--00 |

| | |
|---|---|
| * ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ. 200--00 |
| * ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ. 100--00 |
| ಅರ್ಚನೆ (ಒಂದು ವರ್ಷ) | ರೂ. 42--00 |
| ಶಾಶ್ವತ ನಿತ್ಯಾರ್ಚನೆ | ರೂ. 542--00 |

೧೧೯೪ ರಲ್ಲಿ ಈ ದೇವಾಲಯವನ್ನು ಧ್ವಂಸಮಾಡಲಾಯಿತು. ಮತ್ತೆ ಕ್ರಿ.ಶ. ೧೪೯೪ ರಲ್ಲಿ ಇದನ್ನು ನೆಲಸಮ ಮಾಡಲಾಯಿತು. ಇದರಿಂದ ರಾಜ್ಯದಲ್ಲೆಲ್ಲ ಘೋರ ಕ್ಷಾಮ ಹರಡಿತು. ಕ್ರಿ.ಶ. ೧೫೮೫ ರಲ್ಲಿ ದೇವಾಲಯವು ಪುನರ್ ನಿರ್ಮಾಣವಾಯಿತು. ಕ್ರಿ. ಶ. ೧೬೬೯ ರಲ್ಲಿ ಈ ದೇವಾಲಯವನ್ನು ಮತ್ತೆ ಧ್ವಂಸಮಾಡಲಾಯಿತು. ಮೂಲ ಜ್ಯೋತಿರ್ಲಿಂಗವು 'ಜ್ಞಾನವಾಪಿ' ಯಲ್ಲಿ ಇಂದಿಗೂ ಇದೆ. ಕ್ರಿ.ಶ. ೧೭೮೩ ರಲ್ಲಿ ರಾಣಿ ಅಹಲ್ಯಾಬಾಯಿಯೂ ಪಕ್ಕದಲ್ಲೆ ವಿಶ್ವೇಶ್ವರಾಲಯವನ್ನು ನಿರ್ಮಿಸಿದಳು. ಈಗ ಅದನ್ನೇ ಜ್ಯೋತಿರ್ಲಿಂಗವಾಗಿ ಪರಿಗಣಿಸಲಾಗುತ್ತಿದೆ. ಸಿಕ್ಕರ ದೊರೆ ಮಹಾರಾಜ ರಣಜೀತ್ ಸಿಂಗನು ಈ ನೂತನ ದೇವಾಲಯದ ಗೋಪುರಕ್ಕೆ ಚಿನ್ನದ ಲೇಪನ ಮಾಡಿಸಿದನು.

ಕಾಶಿ ವಿಶ್ವವಿದ್ಯಾನಿಲಯದ ಆವರಣದಲ್ಲಿನ ಅಮೃತ ಶಿಲೆಯ ವಿಶ್ವನಾಥದೇವಾಲಯವು ಬಹಳ ಆಕರ್ಷಕವಾಗಿದೆ.

ಸಂತ ತುಳಸೀದಾಸರು ಇಲ್ಲಿಯೇ ವಾಸ ಮಾಡುತ್ತಿದ್ದರು. ಅದರ ನೆನಪಿಗೆ ತುಳಸಿ ಮಾನಸ ದೇವಾಲಯವಿದೆ.

## ೮. ತ್ರ್ಯಂಬಕೇಶ್ವರ ಜ್ಯೋತಿರ್ಲಿಂಗ :

ಮಹಾರಾಷ್ಟ್ರದ ನಾಸಿಕ್‌ಗೆ ಸುಮಾರು ೨೦ ಮೈಲಿಗಳ ದೂರದಲ್ಲಿ ತ್ರ್ಯಂಬಕೇಶ್ವರದಲ್ಲಿ 'ತ್ರ್ಯಂಬಕೇಶ್ವರ ಜ್ಯೋತಿರ್ಲಿಂಗ' ವಿದೆ. ಇದರ ಸಮೀಪದಲ್ಲಿ ಬ್ರಹ್ಮಗಿರಿ ಪರ್ವತವಿದೆ. ಇಲ್ಲಿ ಗೌತಮ ಮಹರ್ಷಿಯು ಸಾವಿರ ವರ್ಷಗಳವರೆಗೆ ಕಠೋರ ತಪಸ್ಸು ಮಾಡಿದನು. ಇದರಿಂದ ಪ್ರಸನ್ನನಾದ ವರುಣನು ಪ್ರತ್ಯಕ್ಷನಾಗಿ ವರ ಕೇಳಿಕೋ ಎಂದು ಕೇಳಲು, ಗೋದಾವರಿ ನದಿಯನ್ನು ಅನುಗ್ರಹಿಸುವಂತೆ ಆತ ಕೇಳಿದನು. ಅಂತೆಯೇ ಈ ಕ್ಷೇತ್ರದ ಬಳಿ ಗೋದಾವರಿ ಜನಿಸಿ, ಗೌತಮಿ ಎಂಬ ಹೆಸರು ಪಡೆದಳು.

ತ್ರ್ಯಂಬಕೇಶ್ವರಾಲಯದ ಒಳಭಾಗದಲ್ಲಿ ಒಂದು ಚಿಕ್ಕದಾದ ತಗ್ಗಿನಲ್ಲಿ ಮೂರು ಲಿಂಗಗಳಿವೆ. ಇವನ್ನು ಬ್ರಹ್ಮ ವಿಷ್ಣು, ಮಹೇಶ್ವರರ ಪ್ರತೀಕಗಳೆಂದು ಭಾವಿಸಲಾಗಿದೆ. ಗೋದಾವರಿಯ ಧಾರೆಯೊಂದು ಈ ತ್ರಿಮೂರ್ತಿಲಿಂಗಗಳ ಮೇಲೆ ಬೀಳುತ್ತದೆ. ಈ ತ್ರಿಮೂರ್ತಿಗಳ ಹಾಗೂ ತ್ರ್ಯಂಬಕೇಶ್ವರನ ದರ್ಶನ, ಪೂಜಾದಿಗಳು ಲೋಕ, ಪರಲೋಕಗಳಲ್ಲಿ ಆನಂದ ಪ್ರಾಪ್ತಿಗೆ ದಾರಿ ಎಂದು ನಂಬಲಾಗಿದೆ.

ಗೌತಮ, ಅಹಲ್ಯೆಯರು ಇಲ್ಲಿದ್ದಾಗ ಅವರ ಪರೋಪಕಾರ ಸೇವೆ ಹಾಗೂ ದೈವ ನಿಷ್ಠೆಗೆ ಪ್ರಸಿ

ದ್ಧರಾದರು. ಇದು ಇಲ್ಲಿನ ಇತರೇ ಋಷಿಗಳಿಗೆ ಸಹನೆಯಾಗಲಿಲ್ಲ. ಅವರು ಗೌತಮರನ್ನು ಆ ಪ್ರದೇಶದಿಂದಲೇ ಓಡಿಸಲು ಸಂಚುಮಾಡಿದರು. ಅವರು ಒಂದು ಗೋವನ್ನು ಸೃಷ್ಟಿಸಿ, ಗೌತಮರ ಹೊಲಗದ್ದೆಗಳಲ್ಲಿ ಬಿಟ್ಟರು. ಗೌತಮರು ಅದನ್ನು ಓಡಿಸಲು ದರ್ಭೆ ಪ್ರಯೋಗಿಸಿದರು. ಕೂಡಲೇ ಅದು ಮರಣಿಸಿತು. ಗೌತಮರ ಮೇಲೆ ಗೋಹತ್ಯಾ ದೋಷ ಹೊರೆಸಿ ದೇಶಾಟನೆ ಶಿಕ್ಷೆ ವಿಧಿಸಿದರು. ಅಂತೆಯೇ ದೇಶಾಟನೆ ಮಾಡಿ, ಪರಶಿವನನ್ನು ಮೆಚ್ಚಿಸಿದ್ದರಿಂದ, 'ತ್ರ್ಯಂಬಕೇಶ್ವರ ಜ್ಯೋತಿರ್ಲಿಂಗ'ವಾಗಿ ಆತನು ಇಲ್ಲಿಯೇ ನೆಲೆಸಿದನು.

## ೯. ವೈದ್ಯನಾಥ ಜ್ಯೋತಿರ್ಲಿಂಗ :

ಬಿಹಾರ್‌ನಲ್ಲಿನ ಸಂತಾಲ್ ಪರಗಣಗಳ ಕ್ಷೇತ್ರದಲ್ಲಿ 'ವೈದ್ಯನಾಥ ಧಾಮ'ವಿದೆ. ಇಲ್ಲಿ ವೈದ್ಯನಾಥನ ರೂಪದಲ್ಲಿ 'ಪರಮೇಶ್ವರ ಜ್ಯೋತಿರ್ಲಿಂಗ'ವಿದೆ. ಒಮ್ಮೆ ರಾವಣನು ಶಿವನನ್ನು ಪ್ರಸನ್ನಗೊಳಿಸಿ, ವರಗಳನ್ನು ಪಡೆಯಲು ಘೋರ ತಪಸ್ಸು ಮಾಡತೊಡಗಿದ. ಕಡೆಗೆ ತನ್ನ ಶಿರಗಳನ್ನು ಕತ್ತರಿಸಿ ಅರ್ಪಿಸತೊಡಗಿದ. ಕಡೆಗೆ ಶಿವನು ಪ್ರತ್ಯಕ್ಷನಾಗಿ ಅವನ ಬೇಡಿಕೆಯಂತೆ ಆತ್ಮಲಿಂಗ ನೀಡಿದ. ರೋಗಿಗಳಿಗೆ ವೈದ್ಯನಾಥನಾಗಿ ತಾನಿರುವೆನೆಂದು ಅಭಯ ನೀಡಿದ. ಅಂತೆಯೇ ಆ ಆತ್ಮಲಿಂಗವನ್ನು ತೆಗೆದುಕೊಂಡು ಲಂಕೆಗೆ ಹೋಗುತ್ತಿರುವಾಗ 'ಲಘುಶಂಕೆ' ಮುಗಿಸಿಕೊಳ್ಳುವ ಅಗತ್ಯ ಉಂಟಾಯಿತು. ಕೂಡಲೇ ಅಲ್ಲಿದ್ದ ಗೋಪಾಲಕನನ್ನು ಕರೆದು, ಆ ಆತ್ಮಲಿಂಗವನ್ನು ಅವನ ಕೈನಲ್ಲಿರಿಸಿ, ಕೆಳಗೆ ಇಡಕೂಡದೆಂದು ಹೇಳಿ, ಲಘುಶಂಕೆಗೆ ಹೋದನು. ಆ ಲಿಂಗದ ಭಾರವನ್ನು ತಡೆಯಲಾರದೆ ಆ ಹುಡುಗ ಅದನ್ನು ನೆಲದ ಮೇಲೆ ಇಟ್ಟನು. ಮತ್ತಿನ್ನೇನು -- ಹಿಂತಿರುಗಿ ಬಂದ ರಾವಣನು ನಡೆದುದೆಲ್ಲವನ್ನೂ ಆಲಿಸಿ, ತುಂಬಾ ಬೇಸರಗೊಂಡನು. ತನ್ನ ಪೂರ್ಣ ಶಕ್ತಿಯನ್ನು ಪ್ರಯೋಗಿಸಿ ಅದನ್ನು ಮೇಲೆತ್ತಲು ಪ್ರಯತ್ನಿಸಿದನು. ಸಾಧ್ಯವಾಗದ್ದರಿಂದ ನಿರಾಶನಾಗಿ ಆ ಲಿಂಗದ ಮೇಲೆ ಹೆಬ್ಬೆರಳಿನಿಂದ ತಿವಿದು, ಬರಿಗೈನಿಂದ ಲಂಕೆಗೆ ಹಿಂತಿರುಗಿದ. (ಇಂತಹುದೊಂದು ಕಥೆ ಗೋಕರ್ಣದ ಬಗ್ಗೆಯೂ ಇರುವುದು ಆಶ್ಚರ್ಯ.)

ಬ್ರಹ್ಮ, ವಿಷ್ಣು, ದೇವತೆಗಳು ಈ ದಿವ್ಯಲಿಂಗಕ್ಕೆ ಪೂಜೆ ಮಾಡಿದರು. ಈತ ಮಹಾನ್ ಫಲಗಳನ್ನು ನೀಡುವವನಾದುದರಿಂದ 'ವೈದ್ಯನಾಥ' ಎಂಬ ಹೆಸರು ಬಂದಿತು. ಈ ಲಿಂಗದ ಮೇಲ್ಭಾಗದಲ್ಲಿ ರಾವಣನ ಹೆಬ್ಬೆಟ್ಟಿನ ಚಿಹ್ನೆಯೂ ಇದೆ.

'ಪರಲ್ಯಾಂ ವೈದ್ಯನಾಥಂ ಚ' ಎನ್ನುವಂತೆ ಆಂಧ್ರಪ್ರದೇಶದ ಪರಲೀಗ್ರಾಮದ ಬಳಿ ಇರುವ ಶಿವಲಿಂಗವೇ 'ವೈದ್ಯನಾಥ ಜ್ಯೋತಿರ್ಲಿಂಗ' ಎನ್ನುವ ವಾದವೂ ಇದೆ.

## ೧೦. ನಾಗೇಶ್ವರ ಜ್ಯೋತಿರ್ಲಿಂಗ :

ಗುಜರಾತ್‌ನಲ್ಲಿ ದ್ವಾರಕಾ ನಗರದ ಬಳಿ ಗೋಮತೀ -- ದ್ವಾರಕೆಯಿಂದ ಬೇಟ್ -- ದ್ವಾರಕಾಗೆ ಹೋಗುವಾಗ ಸುಮಾರು ೧೩.ಮೈಲಿ ದೂರದಲ್ಲಿ ಈಶಾನ್ಯದಿಕ್ಕಿನಲ್ಲಿ ಈ ಪುಣ್ಯಸ್ಥಳವಿದೆ. ಇಲ್ಲಿ ನಾಗೇಶ್ವರ ಅಥವಾ 'ನಾಗನಾಥ ಜ್ಯೋತಿರ್ಲಿಂಗ' ಇದೆ.

ದಾರುಕಿ ಎನ್ನುವ ರಾಕ್ಷಸಿಯು ಪಾರ್ವತಿಯಿಂದ ಅನುಗ್ರಹಿತಳಾಗಿದ್ದಳು. ಇದರಿಂದ ಗರ್ವಿತಳಾಗಿ ತನ್ನ ಗಂಡ ದಾರುಕನೊಂದಿಗೆ ಕೂಡಿಕೊಂಡು ಇತರೇ ರಾಕ್ಷಸರ ಸಹಕಾರದಿಂದ ಸಾಧುಗಳು, ಋಷಿಗಳು, ಸತ್ಪ್ರಜೆಗಳನ್ನು ಹಿಂಸಿಸುತ್ತಿದ್ದಳು. ಇದರಿಂದ ಕೋಪಗೊಂಡ ಓರ್ವ ಮುನಿಯೂ ಈ ಭೂಮಿಯ ಮೇಲೆ ಯಾರಿಗೇ ಹಾಗೆ ಮಾಡಿದರೂ ಮರಣವು ಖಂಡಿತ ಎಂದು ಶಪಿಸಲು, ದಾರುಕಿಯು ದಾರುಕಾವನವನ್ನೇ ಭೂಮಿಯಿಂದ ಮೇಲೆತ್ತಿ, ತೆಗೆದುಕೊಂಡು ಹೋಗಿ ಸಮುದ್ರ ಮಧ್ಯದಲ್ಲಿ ಹಾಕಿ ಅಲ್ಲಿಂದಲೇ ತನ್ನ ದುಶ್ಚರ್ಯೆಗಳನ್ನು ನಡೆಸತೊಡಗಿದಳು.

ಪರಮ ಶಿವಭಕ್ತನಾದ ಸುಪ್ರಿಯ ಎನ್ನುವ ವೈಶ್ಯನು ಒಮ್ಮೆ ವ್ಯಾಪಾರದ ಕಾರಣ ನೌಕೆಯಲ್ಲಿ ಹೋಗುತ್ತಿದ್ದ. ದಾರುಕನು ಅವನನ್ನು ಸೆರೆ ಹಿಡಿದು ತನ್ನ ನಗರದಲ್ಲಿ ಬಂಧಿಸಿಟ್ಟನು. ಆದರೆ ಸುಪ್ರಿಯನು ಕಾರಾಗೃಹದಲ್ಲಿಯೂ ಸದಾ ಶಿವಪೂಜೆಯಲ್ಲಿ ನಿರತನಾಗುತ್ತಾ, ಇತರರಲ್ಲೂ ಶಿವಭಕ್ತಿಯನ್ನು ಜಾಗೃತಗೊಳಿಸಿದ. ಒಮ್ಮೆ ಸುಪ್ರಿಯನು ಧ್ಯಾನಾಸಕ್ತನಾಗಿದ್ದಾಗ ದಾರುಕನು ಅವನನ್ನು ವಧಿಸಲು ಪ್ರಯತ್ನಿಸಿದ. ಆಗ ಅವನು ತಾನು ಪೂಜೆ ಮಾಡುತ್ತಿದ್ದ ಶಿವಲಿಂಗವನ್ನೇ ಅಪ್ಪಿಕೊಂಡ. ಕೂಡಲೇ ಶಿವನು ಪ್ರತ್ಯಕ್ಷನಾಗಿ ಪಾಶುಪತಾಸ್ತ್ರವನ್ನು ಅವನಿಗೆ ಅನುಗ್ರಹಿಸಿ ದುಷ್ಟಶಿಕ್ಷಣ ಮಾಡುವಂತೆ ಅನುಗ್ರಹಿಸಿದ. ಸುಪ್ರಿಯನು ತಕ್ಷಣ ಆ ಅಸ್ತ್ರದಿಂದ ದಾರುಕ ದಂಪತಿಗಳನ್ನು ಸಂಹರಿಸಿ, ಉಳಿದ ರಾಕ್ಷಸಗಣವನ್ನು ನಿರ್ನಾಮ ಮಾಡಿದನು.

ಇದರಿಂದ ಪರಶಿವನು ಇಲ್ಲಿಯೇ ನೆಲೆಸಿ ಜ್ಯೋತಿರ್ಲಿಂಗವಾದನು.

ಇದು ಆಂಧ್ರಪ್ರದೇಶದ ಜೋಗ್ರಿ ರೈಲ್ವೆ ನಿಲ್ದಾಣದಿಂದ ೧೨ ಮೈಲಿಗಳ ದೂರದಲ್ಲಿದೆ ಎಂದೂ ಹೇಳುತ್ತಾರೆ.

## ೧೧. ರಾಮೇಶ್ವರ ಜ್ಯೋತಿರ್ಲಿಂಗ :

ತಮಿಳುನಾಡಿನ ರಾಮನಾಥ್ ಜಿಲ್ಲೆಯಲ್ಲಿ ಸಮುದ್ರತೀರದಲ್ಲಿ ರಾಮೇಶ್ವರ ಎನ್ನುವ ನಗರವಿದೆ. ತೀರದಿಂದ ಸ್ವಲ್ಪ ದೂರದಲ್ಲಿ ೩೧ ಮೈಲಿ ಉದ್ದ, ೭ ಮೈಲಿ ಅಗಲವಿರುವ ದ್ವೀಪದಲ್ಲಿ ರಾಮೇಶ್ವರ ಜ್ಯೋತಿರ್ಲಿಂಗವಿದೆ. ಪಾಂಬನ್ ಸೇತುವೆಯ ಮುಖಾಂತರ ರಾಮೇಶ್ವರವನ್ನು ತಲುಪಬಹುದು. ಇದರ ಬಳಿಯಲ್ಲೆ ಸೇತುಬಂಧನವಿದೆ.

ಈ ದ್ವೀಪವು ಗಂಧಮಾದನ ಪರ್ವತ. ಇಲ್ಲಿ ಶ್ರೀರಾಮನ ಸ್ವತಃ ತನ್ನ ಕೈಗಳಿಂದಲೇ ಇಲ್ಲಿನ ಜ್ಯೋತಿರ್ಲಿಂಗವನ್ನು ಪ್ರತಿಷ್ಠಾಪಿಸಿದ.

ಲಂಕೆಯ ಮೇಲಿನ ದಂಡಯಾತ್ರೆಗೆ ಶ್ರೀರಾಮನು ಕಪಿಸೈನ್ಯದ ಸಹಿತ ಇಲ್ಲಿ ಬಂದು ಇಳಿದು, ಮರಳಿನಿಂದ ಶಿವಲಿಂಗವೊಂದನ್ನು ನಿರ್ಮಿಸಿ ಪೂಜೆ ಮಾಡಿದನು. ಇದೊಂದು ಕಥೆ.

ಮತ್ತೊಂದು ಕಥೆ ಹೀಗಿದೆ -- ಸೈನ್ಯ ಸಮೇತ ಈ ಪ್ರದೇಶಕ್ಕೆ ಶ್ರೀರಾಮನು ಬಂದು ಇಳಿದ ಕೂಡಲೇ, ಬಿಸಿಲಿನ ಬೇಗೆಯನ್ನು ತಡೆಯಲಾರದೆ ಮರಳನ್ನು ಅಗೆದಾಗ ಸಿಹಿನೀರಿನ ಊಟೆಯೊಂದು ದೊರೆಯಿತು. ಅದರ ನೀರನ್ನು ಕುಡಿಯಬೇಕೆಂದಿದ್ದಾಗ ತನ್ನನ್ನು ಪೂಜಿಸದೆ ನೀರು ಕುಡಿಯುವರೇನು? ಎನ್ನುವ ಅಶರೀರವಾಣಿಯಾಯಿತು. ಅದರಂತೆ ಶ್ರೀರಾಮನು ಮರಳಿನ ಲಿಂಗವನ್ನು ನಿರ್ಮಿಸಿ, ಅದನ್ನು ಪೂಜಿಸಿ, ರಾವಣನ ಮೇಲೆ ಜಯಗಳಿಸಲು ಅನುಗ್ರಹಿಸಬೇಕೆಂದ ಬೇಡಿದನು. ಪರಶಿವನು ಅದನ್ನು ಅನುಗ್ರಹಿಸಿದನು. ಅಂತೆಯೇ ಲೋಕರಕ್ಷಣಾರ್ಥವಾಗಿ ಜ್ಯೋತಿರ್ಲಿಂಗರೂಪದಲ್ಲಿ ಅಲ್ಲಿಯೇ ನೆಲೆಸಿದನು.

ಇವೆಲ್ಲಕ್ಕಿಂತ ಭಿನ್ನವಾದೊಂದು ಕಥೆ ಹೀಗಿದೆ--

ಲಂಕೆಯ ವಿಜಯದ ನಂತರ ಶ್ರೀರಾಮನಿಗೆ ಬ್ರಹ್ಮಹತ್ಯಾ ದೋಷವು ಪ್ರಾಪ್ತವಾಯಿತು. ಇದರಿಂದ ಪರಿಹಾರ ಪಡೆಯಲು ಸ್ವಯಂ ಶಿವಲಿಂಗವನ್ನು ಸ್ಥಾಪನೆ ಮಾಡಿ, ಅರ್ಚಿಸಿ, ಆರಾಧಿಸಬೇಕೆಂದು ಋಷಿಗಳು ತಿಳಿಸಿದರು.

ಅದರಂತೆ ಪೂಜೆಗಾಗಿ ಸಿದ್ಧತೆಗಳನ್ನು ಮಾಡಿಕೊಳ್ಳತೊಡಗಿ, ಶಿವನಿಂದ ಆತ್ಮಲಿಂಗ ತರುವಂತೆ ಶ್ರೀರಾಮನು ಹನುಮಂತನಿಗೆ ತಿಳಿಸಿದನು. ಅಂತೆಯೇ





# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

### ಆಲಯ ಕಾರ್ಯಕ್ರಮ.

| | |
|---|---|
| ಸುಪ್ರಭಾತ | ಬೆಳಗ್ಗೆ 5--00 ಗಂಟೆಗೆ |
| ಸಹಸ್ರನಾಮಾರ್ಚನೆ | ಬೆಳಗ್ಗೆ 5--30 ಗಂಟೆಗೆ |
| (ರೂ 6--00 ಶುಲ್ಕದಿಂದ ನಾಲ್ಕು ಮಂದಿಗೆ ಪ್ರವೇಶ) | |
| 1ನೇ ಗಂಟೆ | ಬೆಳಗ್ಗೆ 6--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 6--30 ಗಂಟೆಗೆ |
| ಶುದ್ಧಿ 2ನೇ ಗಂಟೆ | ಬೆಳಗ್ಗೆ 11--30 ಗಂಟೆಗೆ |
| ಸರ್ವದರ್ಶನ | ಮಧ್ಯಾಹ್ನ 12--00 ಗಂಟೆಗೆ |
| 3ನೇ ಗಂಟೆ | ಸಂಜೆ 6--00 ಗಂಟೆಗೆ |
| ಸರ್ವದರ್ಶನ | ಸಂಜೆ 6--30 ಗಂಟೆಗೆ |
| ಶುದ್ಧಿ | ರಾತ್ರಿ 8--45 ಗಂಟೆಗೆ |
| ಏಕಾಂತ | ರಾತ್ರಿ 9--00 ಗಂಟೆಗೆ |

### ಶುಕ್ರವಾರಗಳಲ್ಲಿ

| | |
|---|---|
| ಅಭಿಷೇಕ | ಬೆಳಗ್ಗೆ 9--00 ಗಂಟೆಗೆ |
| (ರೂ. 100/-- ಶುಲ್ಕದಿಂದ ಒಬ್ಬರಿಗೆ ಪ್ರವೇಶ) | |
| (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 5/--) | |
| ಎರಡನೇ ಗಂಟೆ | ಬೆಳಗ್ಗೆ 11--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 11--30 ಗಂಟೆಗೆ |
| ಊಂಜಲ್‌ಸೇವೆ | ಸಂಜೆ 7--00 ಗಂಟೆಗೆ |
| (ಮುಕುರ ಮಂಟಪದಲ್ಲಿ, ಶುಲ್ಕ ರೂ 150/--) | |
| (5 ಗ್ರಾಂಗಳ ಬೆಳ್ಳಿಯ ಪದಕ ಬಹುಮಾನ ಉಂಟು) | |
| 3ನೇ ಗಂಟೆ | ರಾತ್ರಿ 8--00 ಗಂಟೆಗೆ |
| ಸರ್ವದರ್ಶನ | ರಾತ್ರಿ 8--30 ಗಂಟೆಗೆ |
| ಶುದ್ಧಿ | ರಾತ್ರಿ 9--30 ಗಂಟೆಗೆ |
| ಏಕಾಂತಸೇವೆ | ರಾತ್ರಿ 9--45 ಗಂಟೆಗೆ |

**ಪೇಷ್ಕಾರ್.**

ಹನುಮಂತನು ಕೈಲಾಸವನ್ನು ತಲುಪಿದಾಗ ಅವನಿಗೆ ಪರಶಿವನ ದರ್ಶನವಾಗಲಿಲ್ಲ. ಅದರಿಂದ ಅವನು ಶಿವನನ್ನು ಕುರಿತು ತಪಸ್ಸು ಮಾಡತೊಡಗಿದ.

ಇತ್ತ ಕಡೆ, ಮೂಹೂರ್ತಕ್ಕೆ ಸರಿಯಾಗಿ ಆಂಜನೇಯನು ಬರದೆ ಇದ್ದಾದರಿಂದ, ಶ್ರೀರಾಮನ ಸೂಚನೆಯಂತೆ ಸೀತಾದೇವಿಯು ಮರಳಿನಿಂದ ಒಂದು ಶಿವಲಿಂಗವನ್ನು ನಿರ್ಮಿಸಿದಳು. ಸೂಕ್ತ ಸಮಯದಲ್ಲಿ ಅದನ್ನೇ ಸ್ಥಾಪನೆ ಮಾಡಿದ್ದರಿಂದ, ಅದನ್ನೇ 'ರಾಮೇಶ್ವರ ಜ್ಯೋತಿರ್ಲಿಂಗ'ವೆಂದು ಕರೆಯಲಾಯಿತು.

ಇಷ್ಟರಲ್ಲಿ ಹನುಮಂತನೂ ಕೂಡ ಆತ್ಮಲಿಂಗವನ್ನು ತಂದ. ಅಲ್ಲಿದ್ದ ಮರಳಲಿಂಗವನ್ನು ಕಂಡು, ರೋಷಗೊಂಡ. ಇದನ್ನು ಕಂಡ ಶ್ರೀರಾಮನು ಆ ಮರಳ ಲಿಂಗವನ್ನು ಕಿತ್ತು ಸಮೂದ್ರದಲ್ಲಿ ಬಿಸಾಕಿ, ಕೈಲಾಸದಿಂದ ತಂದ ಲಿಂಗವನ್ನು ಪ್ರತಿಷ್ಠಾಪಿಸುವಂತೆ ಹನುಮಂತನಿಗೆ ತಿಳಿಸಿದ. ಹನುಮಂತ ಎಷ್ಟೇ ಪ್ರಯತ್ನ ಪಟ್ಟರೂ ಆ ಮರಳ ಲಿಂಗ ಮೇಲೆ ಬರಲಿಲ್ಲ. ಹನುಮಂತನ ಅಹಂ ಅಳಿಯಿತು. ತನ್ನ ತಪ್ಪನ್ನು ಕ್ಷಮಿಸುವಂತೆ ಶ್ರೀರಾಮನನ್ನು ಬೇಡಿಕೊಂಡ. ಇದರಿಂದ ಶ್ರೀರಾಮನು ಅನುಮದೀಶ್ವರ ಲಿಂಗವನ್ನು, ಶ್ರೀರಾಮೇಶ್ವರ ಲಿಂಗದ ಪಕ್ಕದಲ್ಲಿ ಪ್ರತಿಷ್ಠಾಪಿಸಿ, ಮೊದಲು ಅದಕ್ಕೆ ಪೂಜೆ ಸಲ್ಲಿಸಿದ ನಂತರ ರಾಮೇಶ್ವರ ಲಿಂಗಕ್ಕೆ ಪೂಜೆಯಾಗಬೇಕೆಂದು ತಿಳಿಸಿದನು. ಕಾಶಿಯಿಂದ ತಂದ ಗಂಗಾಜಲವನ್ನು ಈ ಶಿವಲಿಂಗಗಳ ಮೇಲೆ ಹೊಯ್ದರೆ ತುಂಬಾ ಪುಣ್ಯ ಬರುತ್ತದೆಯೆಂದು ನಂಬಿಕೆ ಹೆಚ್ಚಾಗಿರುವುದರಿಂದ ಭಕ್ತರು ಅದೇ ರೀತಿ ಮಾಡುವರು.

### ೧೨. ಘುಶ್ಮೇಶ್ವರ ಜ್ಯೋತಿರ್ಲಿಂಗ :

ಮಹಾರಾಷ್ಟ್ರದ ಎಲ್ಲೋರ ಗುಹೆಗಳ ಸಮಿಪದಲ್ಲಿ ದೌಲತಾಬಾದ್‌ನಿಂದ ೧೦ ಕಿ. ಮಿ. ದೂರದಲ್ಲಿ ಈ ಕ್ಷೇತ್ರವಿದೆ. ಇದೊಂದು ಪ್ರಾಚೀನವಾದ ಹಾಗೂ ಧಾರ್ಮಿಕ ಮಹತ್ವವನ್ನು ಪಡೆದಿರುವ ಕ್ಷೇತ್ರ. ಇದರ ಮಹಿಮೆ ಅನಂತವಾದುದು. ಘುಷ್ಮಾ ಎನ್ನುವ ಪತಿವ್ರತೆಯ ಮಹಾತ್ಮೆಯಿಂದ ಈ ದೇವದೇವನು ಇಲ್ಲಿಗೆ ಬರುವಂತಹದ್ದಾದುದರಿಂದ ಈತನಿಗೆ ಘುಶ್ಮೇಶ್ವರ ಜ್ಯೋತಿರ್ಲಿಂಗ ಎಂಬ ಹೆಸರಾಯಿತು. ಇಲ್ಲಿನ ದೇವಾಲಯವನ್ನು ರಾಣಿ ಅಹಲ್ಯಾದೇವಿ ಪುನರ್ನಿರ್ಮಿಸಿದಳು.



# ಮುರ್ಡೇಶ್ವರ



ಹದಿನೇಳನೇ ರಾಷ್ಟ್ರೀಯ ಹೆದ್ದಾರಿಯಲ್ಲಿ ಉತ್ತರ ನ್ನಡ ಜಿಲ್ಲೆಯ ಭಟ್ಕಳ ಪೇಟೆಯಿಂದ ಸುಮಾರು ಾಲ್ಕೈದು ಕಿ.ಮಿ. ಉತ್ತರಕ್ಕೆ ಹೋದೊಡನೆ ಎಡಗ ಗೆ ತಲೆಯೆತ್ತಿ ನಿಂತ ಕಲ್ಲಿನ ಕೆತ್ತನೆಗಳಿಂದ ಅಲಂಕೃ ವಾದ ಸ್ವಾಗತ ಕಮಾನೊಂದು ಎಲ್ಲಾ ಪ್ರಯಾಣಿಕ ನ್ನು ಆಕರ್ಷಿಸಿ ಪ್ರಶ್ನಿಸುವಂತೆ ಮಾಡುತ್ತದೆ. ಇದು ಗ ಬೇಲೂರು -- ಹಳೆಬೀಡುಗಳ ಸಾಲಿನಲ್ಲಿ ಲ್ಲುವ; ಈ ಶತಮಾನದ ಅದ್ಭುತ ಕಲಾಕೃತಿಗ ಲ್ಲಿ ಒಂದಾದ ಮುರ್ಡೇಶ್ವರ ದೇವಸ್ಥಾನದ ಸ್ವಾಗತ ಮಾನು. ಈ ಸ್ಥಳವು ಅತ್ಯಂತ ಉತ್ಸುಕವಾದ ದೈವೀ ೃತ ಕ್ಷೇತ್ರ ಮಹಿಮೆಯನ್ನು ಹೊಂದಿದೆ.

ಮಹೇಶ್ವರನ ಆತ್ಮಲಿಂಗವನ್ನು ರಾವಣ ಪಡೆದು ದನ್ನೂ, ಅದು ಪಂಚ ಕ್ಷೇತ್ರದಲ್ಲಿ ನೆಲೆಸಿದ ಕಲಾ ಕೃತಿಗಳು ಇಲ್ಲಿ ಚಿತ್ರಿಸಲ್ಪಟ್ಟಿವೆ. ಈ ಕ್ಷೇತ್ರದ ಪುಣ್ಯ ಕಥಾ ಭಾಗಗಳನ್ನು ಗೋಪುರದ ಹೊರ ಪಾರ್ಶ್ವ ಗಳಲ್ಲಿ ಶಿಲೆಯಲ್ಲಿ ಕಡೆಯಲಾಗಿದೆ. ಈ ಕಲ್ಲಿನ ಆಕೃತಿಗಳು ನುರಿತ ಶಿಲ್ಪಿಗಳ ಚಾಣಗಳಿಂದ ಸಜೀವ ಮೂರ್ತಿಗಳೋ ಎಂದು ಭಾಸವಾಗುವಷ್ಟು ನೈಜ ವಾಗಿ ಮೂಡಿ ಬಂದಿವೆ.

ತ್ರೇತಾ ಯುಗದಲ್ಲಿ ಸರ್ವ ಸಂಪನ್ನನೂ, ಸರ್ವ ಸಮರ್ಥನೂ ಆದ ಲಂಕಾಧೀಶ್ವರನಾದ ರಾವ ಣನು ಪರಮೇಶ್ವರನಿಂದ ಆತ್ಮಲಿಂಗವನ್ನು ಪಡೆದು ಆರಾಧಿಸಿ ತಾನು ಅಜೇಯನೂ, ಅಮರನೂ, ಸರ್ವೇಶ್ವರನೂ ಆಗಬೇಕೆಂಬ ಮಹಾತ್ವಾಕಾಂಕ್ಷೆ ಯಿಂದ ಕೈಲಾಸಕ್ಕೆ ತೆರಳಿ ಏಕಾಂತದಲ್ಲಿ ಘೋರ ವಾದ ತಪಸ್ಸನ್ನಾಚರಿಸುತ್ತಾನೆ. ಇವನ ಘೋರ ತಪಸ್ಸಿನಿಂದ ಸಂತುಷ್ಟನಾದ ಕೈಲಾಸೇಶ್ವರನು ಪ್ರಸ ನ್ನನಾಗಿ ಬೇಕಾದ ವರವನ್ನು ಅದು ಎಷ್ಟೇ ದುರ್ಲಭ ವಾದರೂ ಕೊಡುತ್ತೇನೆಂಬ ಮಾತಿತ್ತನು. ಆನಂದ ತುಂದಿಲನಾದ ದಶಕಂಠನು (ರಾವಣ) ಸದಾಶಿ ವನ ಮೃಗಶೃಂಗಾತ್ಮಕ ಪ್ರಾಣಲಿಂಗ (ಆತ್ಮಲಿಂಗ) ವನ್ನು ಬೇಡಿದನು.

ರಾವಣನ ಮನೋಗತವನ್ನು ಅರಿತ ಪರಮೇ ಶ್ವರನು ಚಿಂತಾಕ್ರಾಂತನಾದರೂ, ಕರ್ತವ್ಯಚ್ಯುತನಾ ಗಬಾರದೆಂದು ತಾನಿತ್ತ ಮಾತನ್ನು ನೆರವೇರಿಸಲು ಸಂಕಲ್ಪಿಸಿದನು. ಆತ್ಮಲಿಂಗವನ್ನು ತೆಗೆದು ನವರ ತ್ನಮಯವಾದ ಸಂದುಕದಲ್ಲಿ ಈಶಾನ ಮಂತ್ರ ದಿಂದ ಆವಾಹಿಸಿ ಗಂಧ ಪುಷ್ಪಾದಿಗಳಿಂದ ವಿಧಿವ ತ್ತಾಗಿ ಪೂಜಿಸಿ ನಮಸ್ಕರಿಸಿ ಮುಚ್ಚಳವನ್ನು ಹಾಕಿ ದೃಢವಾಗಿ ದೋರ (ದಾರ)ದಿಂದ ಕಟ್ಟಿ ಆಮೇಲೆ ಆ ಕರಡಿಗೆಯನ್ನು ಸಂಪೂರ್ಣ ವಸ್ತ್ರದಿಂದ ಸುತ್ತಿ, ಇತರ ಕ್ರಿಯಾದಿಗಳನ್ನು ತೀರಿಸಿ ರಾವಣೇಶ್ವರನಿಗಿ ತ್ತನು. ದೇವತಾರಾಧನೆಯು ಸುಲಭವಾಗಿ ಸರ್ವ ರಿಗೂ ಅನುಕೂಲವಾಗಬೇಕೆಂಬ ಭವಿಷ್ಯ ಕಾಲದ ಕಾರ್ಯ ಗೌರವವನ್ನು ನಿಶ್ಚಯಿಸಿ ರಾವಣನಿಗೆ ನಿಯ ಮಾವಳಿಯನ್ನು ಹೇಳಿದನು -- "ಹೇ ರಾವಣ ಈ ಲಿಂಗವನ್ನು ಎಲ್ಲಿಯೂ ಭೂಮಿಯ ಮೇಲೆ ಇಡ ಬೇಡ. ಭೂಮಿಯ ಮೇಲೆ ಎಲ್ಲಿ ಇಡುವೆಯೋ ಅಲ್ಲೇ ಸ್ಥಿರವಾಗುವುದು ನಿಶ್ಚಿತ" ಎಂದು ಅಂತರ್ಧಾ ನನಾದನು. ರಾವಣನು ಕೂಡಲೇ ಆ ಆತ್ಮಲಿಂಗ ವನ್ನು ಹಿಡಿದುಕೊಂಡು ದಕ್ಷಿಣಾಭಿಮುಖನಾದನು.

ಈ ಸಮಾಚಾರವನ್ನು ತಿಳಿದ ಸಮಸ್ತ ದೇವತೆ ಗಳು ಚಿಂತಾಕ್ರಾಂತರಾಗಿ ಮಹಾವಿಷ್ಣುವಿನ ಮೊರೆ ಹೊಕ್ಕರು. ಮಹಾವಿಷ್ಣುವು ಲಿಂಗಸ್ಥಾಪನೆಯ ಬಗ್ಗೆ ಉಪಾಯ ಯೋಚಿಸಿ ಮಹಾಗಣಪತಿಯನ್ನು ಪ್ರಾರ್ಥಿಸಿ ಅವನ ಮನವೊಲಿಸಿದನು. ಕೈಲಾಸದಿಂದ ಹೊರಟ ರಾವಣನು ಸಪ್ತ ಕೋಟೀಶ್ವರದಲ್ಲಿ ಮಧ್ಯಾ ಹ್ನಿಕ ವಿಧಿಯನ್ನು ಪೂರೈಸಿ ಗೋಕರ್ಣಕ್ಕೆ ಸಮೀಪಿ ಸಿದ್ದನು. ಆಗ ವಿಷ್ಣುವು ರಾವಣನು ನಿತ್ಯ ಕರ್ಮಾನು ಷ್ಠಾನ ತತ್ಪರನೆಂದು ಭಾವಿಸಿ ಸುದರ್ಶನ ಚಕ್ರದಿಂದ ಸೂರ್ಯನನ್ನು ಮರೆ ಮಾಡಿದನು.

ಸಂಧ್ಯಾಕಾಲವು ಸಮೀಪಿಸಿತೆಂದು ರಾವಣನು ಆತ್ಮಲಿಂಗವನ್ನು ಕೆಳಕ್ಕೆ ಇಡಲಾರದೇ; ಸಂಧ್ಯಾಕಾ ರ್ಯವನ್ನು ಬಿಡಲಾರದೇ; ತೊಳಲಾಡುತ್ತಿರುವಾಗ, ಪೂರ್ವ ಸಂಕೇತದಂತೆ ವಿಘ್ನೇಶ್ವರನು ವಟು ರೂಪ ದಲ್ಲಿ ರಾವಣನ ಎದುರಿಗೆ ಬಂದನು. ಅವ ನನ್ನು ಕಂಡ ರಾವಣನು 'ಸಂಧ್ಯಾ ಕರ್ಮವನ್ನು



ಮುಗಿಸಿ ಬರುವ ತನಕ ಹಿಡಿದುಕೋ' ಎಂದು ಆತ್ಮಲಿಂಗವನ್ನು ಅವನಿ ಗೊಪ್ಪಿಸಿದನು. ಆಗ ಆ ವಟುವು ಲಿಂಗದ ಭಾರ ನಾನು ತಡೆದುಕೊಳ್ಳಲು ಅಶಕ್ತನಾದಾಗ ನಿನ್ನನ್ನು ಮೂರು ಸಾರಿ ಕರೆಯು ವೆನು. ಬಾರದಿದ್ದರೆ ನೆಲದಲ್ಲಿ ಇಡುವೆನು, ಎಂಬ ವಚನದ ಮೇರೆಗೆ ಲಿಂಗವನ್ನು ತೆಗೆದುಕೊಂಡನು. ರಾವಣನು ಸಂಧ್ಯಾವಿಧಿಗೆ ಹೋಗಿ ಪೂರೈಸುವಷ್ಟ ರಲ್ಲೇ ಮೂರು ಸಾರಿ ಕೂಗಿ ಕರೆದು ಲಿಂಗವನ್ನು ಭೂಮಿಯ ಮೇಲೆ ಇಟ್ಟೇ ಬಿಟ್ಟನು. ನೆಲದ ಮೇಲೆ ಇಡುತ್ತಿರುವಾಗಲೇ ಆ ದಿವ್ಯಲಿಂಗವು ಸಪ್ತ ಪಾತಾಳ ವನ್ನು ಭೇದಿಸಿ ಸ್ಥಿರವಾಯಿತು. ಸಂತೋಷಗೊಂಡ ದೇವತೆಗಳು ಪುಷ್ಪವೃಷ್ಟಿಯನ್ನು ಸುರಿಸಿದರು.

ವಿಷ್ಣುವು ಚಕ್ರವನ್ನು ಉಪಸಂಹರಿಸಲು ಸೂರ್ಯನು ಪ್ರಕಾಶಗೊಂಡನು. ರಾವಣನು ತಾನು ದೇವತೆಗಳಿಂದ ಮೋಸಹೋದೆನೆಂದು ತಿಳಿದು ಕ್ರುದ್ಧನಾಗಿ ಭೂಕಂಪವಾಗುವಂತೆ ಆತ್ಮಲಿಂಗವನ್ನು ಎಳೆಯತೊಡಗಿದನು. ಲಿಂಗವು ಕಿಂಚಿನ್ಮಾತ್ರವೂ ಚಲಿಸದಿರಲು ಲಜ್ಜಿತನಾಗಿ ಕೋಪದಿಂದ ವಟು ವಿನ ತಲೆಗೆ ಗುದ್ದಿದನು. ಕಿತ್ತ ಸಂಪುಟವನ್ನು ಉತ್ತರ ದಿಕ್ಕಿಗೆ ಎಸೆದನು. ಇದು ಎರಡು ಯೋಜನ ದೂರದಲ್ಲಿ ಬಿದ್ದು ಸದ್ಯೋಜಾತಾತ್ಮಕ ಲಿಂಗವಾಗಿ ಉದ್ಭವಿಸಿ ಸಂಪುಟೇಶ್ವರ (ಸಜ್ಜೇಶ್ವರ) ಎಂದು ಪ್ರಸಿ ದ್ಧವಾಯಿತು. ಪುನಃ ದೋರ ಸಹಿತ ಸಂಪುಟದ ಮುಚ್ಚಳವನ್ನು ದಕ್ಷಿಣಕ್ಕೆಸೆದನು. ಅದು ಮೂರು ಯೋಜನ ದೂರದಲ್ಲಿ ಬಿದ್ದು ವಾಮದೇವ ಲಿಂಗಾ ತ್ಮಕವಾಗಿ ಉದ್ಭವಿಸಿ ಗುಣೇಶ್ವರ (ಗುಣವಂತೇಶ್ವರ) ಎಂದು ಪ್ರಸಿದ್ಧಿ ಪಡೆಯಿತು. ಪುನಃ ಆತ್ಮಲಿಂಗಕ್ಕೆ ಸುತ್ತಿದ ವಸ್ತ್ರವನ್ನು ದಕ್ಷಿಣಕ್ಕೆ ಎಸೆದನು. ಈ ವಸ್ತ್ರದ ಪಿಂಡಿಯು ಮೂರುವರೆ ಯೋಜನ ದೂರ ಲವಣ ಸಮುದ್ರ ತೀರದ ನಡುಗಡ್ಡೆಯಾದ ಕಂದುಕ ಗಿರಿ ಯಲ್ಲಿ ಬಿದ್ದು ಅಘೋರಾತ್ಮಕ ಲಿಂಗವಾಗಿ ಪ್ರಾದು ರ್ಭವಿಸಿ ಮೃಡೇಶ್ವರ ಎನಿಸಿತು. ಹಾಗೆ ಮೇಲೆ ಕಟ್ಟಿದ ದಾರ ದಕ್ಷಿಣದಲ್ಲಿ ಒಂದು ಒಂದು ಯೋಜನ ದೂರ ದಲ್ಲಿ ಬಿದ್ದು ತತ್ಪುರುಷಾತ್ಮಕ ಲಿಂಗವಾಗಿ ಧೋರೇ ಶ್ವರ (ಧಾರೇಶ್ವರ) ಎಂದು ನಾಮಕರಣಗೊಂಡಿತು. ಇದನ್ನು ವಾಯುದೇವನಿಂದ ತಿಳಿದ ಪರಮೇಶ್ವ ರನು ಪಾರ್ವತಿ ಸಮೇತನಾಗಿ ಈ ಪಂಚ ಸ್ಥಳಗ ಳಿಗೆ ಭೇಟಿಯಿತ್ತು; ಪಂಚಬ್ರಹ್ಮಾತ್ಮಕ ಲಿಂಗಗಳನ್ನು ಪೂಜಿಸಿ, ಇವುಗಳು ಪಂಚ ಪುಣ್ಯಕ್ಷೇತ್ರಗಳಾಗಲೆಂದು ಹರಸಿ ಕೈಲಾಸಕ್ಕೆ ತೆರಳಿದನು.

ಆತ್ಮಲಿಂಗಕ್ಕೆ ಸುತ್ತಿದ ವಸ್ತ್ರದ ಪಿಂಡಿಯೇ ಈಗ ಮೃಡೇಶ್ವರದಲ್ಲಿ ಕಾಣುವ ಶಿವನ ಲಿಂಗವಾಗಿದೆ. ಕ್ಷೇತ್ರಾಧೀಶ್ವರನಾದ ಶ್ರೀ ಮೃಡೇಶ್ವರನ ಪರಿವಾರ ವಾಗಿ ಶ್ರೀ ಮಹಾಗಣಪತಿ, ಗೌರಿ, ದತ್ತಾತ್ರೇಯ, ಸುಬ್ರಹ್ಮಣ್ಯ ಆಂಜನೇಯ, ನವಗ್ರಹ, ನಾಗದೇವರ ಮಂದಿರಗಳಿವೆ. ದೇವಳದ ಎದುರಿಗೆ ನಂದೀಮಂ ಟಪವೂ, ಅಲ್ಲಲ್ಲಿ ಬಲಿಕಲ್ಲುಗಳೂ ಇವೆ. ಸುಬ್ರ ಹ್ಮಣ್ಯ ಗುಡಿ ಮತ್ತು ನವಗ್ರಹ ಕಟ್ಟೆಯನ್ನು ಹೊಸ ದಾಗಿ ಕಟ್ಟಲಾಗಿದೆ. ವಸ್ತ್ರಾವಮರ್ದನವು ಪುರಾಣಗ ಳಲ್ಲಿ ಮೃಡವೆಂದು ಹೇಳಲ್ಪಟ್ಟಿದೆ. ಅದಲ್ಲದೆ ಮೃಡ ವೆಂದರೆ ಸುಖವೆಂಬ ಅರ್ಥವಿದೆ. ಮೃಡಲಿಂಗವುಳ್ಳ ಭೂಮಿಯು ಸುಖ ಭೂಮಿಯಾಗಲೆಂದೂ ಈ ಸ್ಥಳವು ಮೃಡೇಶ್ವರ ಗ್ರಾಮದಲ್ಲಿ ಮೃಡೇಶ್ವರನೆಂದು ಪ್ರಸಿದ್ಧಿ ಪಡೆಯಲೆಂದೂ ಪರಮೇಶ್ವರನು ಹರಸಿದ್ದ ನಂತೆ.

ಈ ದೇವಸ್ಥಾನದ ಹಿಂದುಗಡೆಯ ಕಂದುಕ ಗಿರಿ ಯಲ್ಲಿ ಕಮಂಡಲ ತೀರ್ಥ -- ಜಟಾತೀರ್ಥ -- ಭೀಮ ತೀರ್ಥ -- ಶಂಖ ತೀರ್ಥ ಇತ್ಯಾದಿ ಪುಣ್ಯ ತೀರ್ಥ ಗಳಿವೆ. ಇದಲ್ಲದೆ ದೇವತೀರ್ಥ ಅಥವಾ ಕುಂಭ ತೀರ್ಥವೆಂದು ಕರೆಯಲ್ಪಡುವ ತೀರ್ಥವು ದೇವಸ್ಥಾ ನದ ಎದುರಿನ ಪೇಟೆಯ ಮಧ್ಯದಲ್ಲಿದೆ. "ಸಮು ದ್ರಮಧಿಕಂ ಫಲಂ" ಎಂಬಂತೆ ತೀರ್ಥರಾಜನಾದ ಸಮುದ್ರವೂ ದೇವಳದ ಒತ್ತಿನಲ್ಲೇ ಇದ್ದು ಅಗ್ನಿತೀ ರ್ಥವೆಂದು ಪ್ರಸಿದ್ಧ ಪಡೆದಿದೆ. ಈ ಎಲ್ಲಾ ತೀರ್ಥ ಗಳ ಹಿಂದೆಯೂ ಬಹಳ ರೋಚಕವಾದ ಪುಣ್ಯ ಕತೆ ಗಳಿವೆ. ಭಕ್ತರು ಸರ್ವ ಕಾಲದಲ್ಲಿ ಈ ತೀರ್ಥಗ ಳಲ್ಲಿ ಸ್ನಾನಮಾಡಿ ದಾನ -- ಧರ್ಮ ವ್ರತಾದಿಗ ಳನ್ನು ಕೈಗೊಂಡರೆ ಪಾಪಗಳನ್ನೆಲ್ಲಾ ಕಳೆದು ಪುಣ್ಯ ಶಾಲಿಗಳಾಗುತ್ತಾರೆ ಎಂಬ ನಂಬಿಕೆಯಿದೆ. ಕಂದುಕ ಗಿರಿಯು, ಹಿಂದೆ ರಾಜರ ಆಡಳಿತಕ್ಕೊಳಪಟ್ಟಿರಬ ಹುದಾದ್ದರಿಂದ ಮತ್ತು ಕೋಟೆಯ ಅವಶಿಷ್ಟ ಭಾಗ ವಾಗಿರುವುದರಿಂದ ಇದು ಕೋಟೆ -- ಗುಟ್ಟೆ ಎಂದೇ ಕರೆಯಲ್ಪಟ್ಟಿದೆ.

## ವಿಶೇಷ ಉತ್ಸವಗಳು :

ಯುಗಾದಿಯ ದಿನ ಶ್ರೀ ದೇವರ ಉತ್ಸವ; ಸೌರಯುಗಾದಿ -- ಮೇಷ ಸಂಕ್ರಮಣದ ದಿನ ಮಹಾಪೂಜೆ -- ಬಲಿ ಭಾದ್ರಪದದಲ್ಲಿ ವಿನಾಯಕ ಪೂಜೆ; ವಿಜಯದಶಮಿಯ ದಿನ ಶ್ರೀ ದೇವರ ಪಲ್ಲಕ್ಕಿ ಉತ್ಸವ; ಅಮಾವಾಸ್ಯೆಯ ದಿನ ಭೂತ ಬಲಿ ಮುಂತಾದುವುಗಳು ಇಲ್ಲಿ ನಡೆಯುವ ಪ್ರಮುಖ ಉತ್ಸವಗಳು. ಕಾರ್ತಿಕದಲ್ಲಿ ಪ್ರತಿದಿನ ರಾತ್ರಿ ಕಾರ್ತಿಕ ಪೂಜೆ ಬಲಿ -- ಸೇವಾದಿಗಳಿವೆ. ಪ್ರತಿ ಸೋಮ ವಾರ ಉತ್ಸವ, ಅಮಾವಾಸ್ಯೆಯ ದಿನ ಲಕ್ಷ ದೀಪೋ ತ್ಸವ ಇತ್ಯಾದಿ ವಿಶೇಷ ಕಾರ್ಯಕ್ರಮಗಳಿವೆ. ಶ್ರೀ ದೇವರು ದೇವೀಕಾನಿಗೆ ಹೋಗಿ ರಾತ್ರಿ ಪೂಜಾದಿ ಗಳು ನಡೆದು, ವನಭೋಜನವಾಗಿ, ರಾತ್ರಿ ದೀಪೋ ತ್ಸವ; ಕಟ್ಟೆ ಪೂಜೆ ಇತ್ಯಾದಿಗಳು ನಡೆಯುತ್ತವೆ.

ಶ್ರೀ ಮೃಡೇಶ್ವರ ಕ್ಷೇತ್ರವು ಬಹು ಪ್ರಾಚೀನವಾದ ದೇವಸ್ಥಾನವಾಗಿದೆ. ಈ ಶತಮಾನದ ಪ್ರಾರಂಭ ದಲ್ಲಿ ಗರ್ಭಗುಡಿ ಮತ್ತು ಇತರ ಕಟ್ಟಡಗಳು ಬಹಳ ಜೀರ್ಣವಾಗಿದ್ದವು. ಕ್ರಿ.ಶ. ೧೯೩೫ ರಲ್ಲಿ ಇದರ ಗರ್ಭ ಗೃಹ ಕುಸಿದು ಬಿತ್ತು. ಆಗ ಸಣ್ಣ ಪುಟ್ಟ ರಿಪೇರಿಗಳಿಂದ ಇದು ಜೀರ್ಣೋದ್ಧಾರ ಹೊಂದಿತು. ಆದರೂ ಸವೆ ಯುತ್ತಲೇ ಬಂದಿತ್ತು. ಕ್ರಿ.ಶ. ೧೯೭೫ ರಲ್ಲಿ ಶ್ರೀ ಆರ್.ಎನ್. ಶೆಟ್ಟಿರು ಭಕ್ತ ಜನರ ಸಹಕಾರದಿಂದ ಈ ದೇವಸ್ಥಾನದ ಸರ್ವಾಂಗೀಣ -- ಸರ್ವತೋ ಮುಖ ಜೀರ್ಣೋದ್ಧಾರ ಕಾರ್ಯವನ್ನು ಕೈಗೊಂ ಡರು. ಆರ್.ಎನ್. ಶೆಟ್ಟರ ೩೦ ವರ್ಷಗಳ ತಾಂತ್ರಿಕ ನಿಪುಣತೆಯೊಂದಿಗೆ ಸ್ಥಪತಿ ಶ್ರೀ ಎಸ್. ಕೆ. ಆಚಾ ರಿಯವರ ಕಲಾಕೌಶಲ್ಯ ಇಲ್ಲಿ ಮೇಳೈಸಿದೆ. ಹಲ ವಾರು ಮಂದಿ ತಮಿಳುನಾಡಿನ ಕುಶಲ ಕರ್ಮಿ ಗಳು ತಮ್ಮ ಪ್ರತಿಭೆಯನ್ನು ಒಂಭತ್ತು ವರ್ಷಗಳ ಕಾಲ ಧಾರೆಯೆರೆದು ಈ ದೇವಳವನ್ನು ಕಡೆದು ನಿಲ್ಲಿ ಸಿದ್ದಾರೆ. ೧೯೭೭ ರಲ್ಲಿ ಶ್ರೀ ವಿಘ್ನೇಶ್ವರನ ಮಂದಿ ರದ ನಿರ್ಮಾಣವೇ ಇಷ್ಟು ಬೃಹತ್ತಾದ ಕೆಲಸವನ್ನು ಮಾಡಿಸಿತು ಎಂಬುದು ಶೆಟ್ಟರ ನಂಬಿಕೆ. ಕಾರಣ ಮೊದಲು ಇಷ್ಟು ಬೃಹತ್ ನಿರ್ಮಾಣ ಕಾರ್ಯ ವನ್ನು ಯೋಚಿಸಿರಲಿಲ್ಲವಂತೆ. ಹಣ -- ಸಲಕರ ಣೆಗಳು ಕಡಿಮೆಯಾದಾಗ ಎಲ್ಲಿಂದಲೋ ದೈವೀ ಕೃಪೆಯಾಗಿ ಹರಿದು ಬಂದಿತು.

ಧೈರ್ಯ ಸಾಹಸದಿಂದ ಸಮುದ್ರ ಮಧ್ಯದಲ್ಲಿ ಮಾರ್ಗವನ್ನು ನಿರ್ಮಿಸಿ ದೇವಸ್ಥಾನಕ್ಕೆ ಸೋಪಾನ ವನ್ನು ಮಾಡಿಸಿದ ಈ ಮಹತ್ಕಾರ್ಯವು "ಸದುದ್ದೇಶ ಸತ್ಕಾರ್ಯಕ್ಕೆ ದೇವರ ಬೆಂಬಲವಿದೆ" ಎಂಬುದನ್ನು ಶ್ರುತ ಪಡಿಸಿದೆ. ಈ ದೇವಸ್ಥಾನದ ನಿರ್ಮಾಣದಲ್ಲಿ ಗೋಪುರ ಮತ್ತು ಗಿಲಾಯಿ ಕೆಲಸಗಳನ್ನು ಬಿಟ್ಟರೆ ಮತ್ತೆಲ್ಲೂ ಸಿಮೆಂಟು -- ಗಚ್ಚು -- ಗಾರೆಯನ್ನು ಉಪಯೋಗಿಸಿಲ್ಲ. ಕಬ್ಬಿಣ -- ಕಟ್ಟಿಗೆಗಳೂ ಬಹಳ ಕಡಿಮೆ ಉಪಯೋಗಿಸಲ್ಪಟ್ಟಿವೆ. ನಿರ್ದೋಷ ಶಿಲೆ ಯಿಂದಲೇ ನಿರ್ಮಾಣವಾದ ಈ ಬೃಹತ್ ದೇವ ಸ್ಥಾನ ಕರ್ನಾಟಕದ ಇನ್ನೊಂದು ಹೆಮ್ಮೆಯು, ಈ ಶತ ಮಾನದಲ್ಲಿ ನಿರ್ಮಿಸಲ್ಪಟ್ಟ 'ಬೇಲೂರು' ಎಂದರೆ -- ಇದನ್ನು ಪ್ರತ್ಯಕ್ಷ ಕಂಡವರಿಗೆ ಅತಿಶಯೋಕ್ತಿಯಾಗ ಲಾರದು.

**'ಶಂಕರ್' ಸಾರಡ್ಕ.**

# "ಮುರಳಿಯ ಉಪದೇಶ"

---ಸಂತ ಹರಿಹರಾನಂದಸರಸ್ವತಿ.

ರಾಧೆಗೆ ಯಶೋದಾನಂದನ ಕೃಷ್ಣನೆಂದರೆ ಪಂಚ ಪ್ರಾಣ. ತನ್ನ ಸರ್ವಸ್ವವನ್ನೂ ಅವನಿಗೆ ಅರ್ಪಿಸಿದ್ದ ರಾಧೆಯು ಅವನು ಒಂದು ಕ್ಷಣ ಕಣ್ಮರೆಯಾದರೂ ಚಡಪಡಿಸುತ್ತಾಳೆ. ಮರುಘಳಿಗೆಯಲ್ಲೇ ಕೃಷ್ಣವಿರಹ ಆರಂಭವಾಗುತ್ತದೆ. ಶ್ರೀಕೃಷ್ಣನೂ ಹಾಗೇ ರಾಧೆ ಎಂದರೆ ಮೈಮರೆಯುತ್ತಾನೆ. ಇಬ್ಬರದೂ ಅವಿನಾಭಾವಸಂಬಂಧ. ಆದರೆ ಒಮ್ಮೆ ಮಾತ್ರ ತಿರುವುಮುರುವಾಗಿ ಬಿಡುತ್ತದೆ. ಅದೊಂದು ಅತ್ಯಂತ ಸ್ವಾರಸ್ಯಕರವಾದ ಸನ್ನಿವೇಶ. ಒಮ್ಮೆ ಶ್ರೀಕೃಷ್ಣ ಇದ್ದಕ್ಕಿದ್ದಂತೆ ರಾಧೆಯಿಂದ ದೂರಾಗಿಬಿಡುತ್ತಾನೆ. --ಅವಳಿಗೆ ಇದೊಂದು ಅನಿರೀಕ್ಷಿತ ಆಘಾತ. ರಾಧೆಯ ಬಗೆಗೆ, ಇದ್ದ ಆದರಭಾವ ಕ್ರಮೇಣ ಕಡಿಮೆಯಾಗುತ್ತಾ ಬರುತ್ತದೆ ಶ್ರೀ ಕೃಷ್ಣನಲ್ಲಿ. ರಾಧೆಗೆ ದುಃಖದ ಜೊತೆಗೆ ಆಶ್ಚರ್ಯವೂ ಆಗುತ್ತದೆ. ತನ್ನ ಪ್ರೇಮದ ಪುತ್ಥಳಿಯ ಇತ್ತೀಚಿನ ವಿಚಿತ್ರವರ್ತನೆಯನ್ನು ಕಂಡು, ಹೌದು ಆಕೆಯದೃಷ್ಟಿಗೆ ವಿಚಿತ್ರವೇ ಇದು. ಒಮ್ಮೊಮ್ಮೆ ರಾಧೆಯ ಎದುರು ಬಂದರೂ ಮೂಕನಂತೆ ಮುಂದೆ ಹೋಗುತ್ತಾನೆ, ಕಂಡೂ ಕಾಣದಂತೆ ಮಾತನ್ನಾಡದೆ. ಹೀಗೇ ಸುಮಾರು ತಿಂಗಳಾರು ಕಳೆಯುತ್ತದೆ. ರಾಧೆಯ ಕಣ್ಗಳು ಶ್ರೀಕೃಷ್ಣನ ಮೂರ್ತಿಯನ್ನು ತುಂಬಿಕೊಳ್ಳಲು ತವಕಿಸುತ್ತಿದೆ. ಈಚೆಗೆ ಶ್ರೀಕೃಷ್ಣನಲ್ಲಿ ಆಗಿರುವ ಒಂದು ಬದಲಾವಣೆಯೆಂದರೆ -- ರಾಧೆಗಿಂತಲೂ "ಮುರಳಿ"ಯನ್ನು ಪ್ರೀತಿಸುವುದು. ಒಮ್ಮೆ ತುಟಿಯಂಚಿನಲ್ಲಿ, ಒಮ್ಮೆ ಸೊಂಟದಲ್ಲಿ, ಮತ್ತೊಮ್ಮೆ ಕರದಲ್ಲಿ ಮಗದೊಮ್ಮೆ ಕೃಷ್ಣನ ಪಕ್ಕದಲ್ಲಿ ಮಿನುಗುತ್ತಾಳೆ ಮುರಳಿ. ರಾಧೆಗೆ ಇದು ಅರ್ಥವಾಗುತ್ತಿಲ್ಲ. ನನ್ನನ್ನು ಅನಾದರ ಮಾಡಿ ಕೇವಲ ಆರೇಳುತೂತುಗಳುಳ್ಳ ಬಿದಿರು ತುಂಡನ್ನು ಇಷ್ಟು ಪ್ರೀತಿಸುತ್ತಾನೆಂದರೆ ಏನಿರಬಹುದೆಂದು ತನ್ನಲ್ಲಿಯೇ ಪ್ರಶ್ನೆಮಾಡಿಕೊಳ್ಳುತ್ತಾಳೆ ರಾಧೆ. ಇದೇನು ನಿನ್ನ ವರ್ತನೆ ಎಂದು ಶ್ರೀಕೃಷ್ಣನನ್ನೇ ಕೇಳೋಣವೆಂದರೆ ಅದೇಕೋ ಏನೋ ಅವಳಿಗೆ ಧೈರ್ಯವೇ ಬರುತ್ತಿಲ್ಲ. ಅವಳಿಗೆ ಎಲ್ಲವೂ ಒಂದು ಬಗೆಯ ಒಗಟೇ ಆಗಿ ಕಾಣುತ್ತಿದೆ. ಅದನ್ನು ಬಿಡಿಸಿ ತಿಳಿಯುವುದು ಹೇಗೆಂದು ಚಿಂತಿಸುತ್ತಾಳೆ. ಒಂದು ಉಪಾಯ ಅವಳಿಗೆ ಹೊಳೆಯುತ್ತದೆ. ಈ ವಿಷಯದಲ್ಲಿ ಮುರಳಿಯನ್ನೇ ಪ್ರಶ್ನಿಸಿದರೆ ಹೇಗೆ? ಸಮಸ್ಯೆ ಬಗೆಹರಿಯುತ್ತದೆ. ಆದರೆ ಅಷ್ಟು ಸುಲಭವಲ್ಲ. ಕಾರಣ ಮುರಳಿಯನ್ನು ಯಾವಾಗಲೂ ಕೃಷ್ಣ ತನ್ನ ಹತ್ತಿರವೇ ಇಟ್ಟುಕೊಂಡಿರುತ್ತಾನೆ. ಒಂದು ಕ್ಷಣವೂ ಅದನ್ನು ಬಿಟ್ಟು ಇರುವುದಿಲ್ಲ. (ಇತ್ತೀಚೆಗೆ) ರಾಧಾಲೋಲನಾಗುವ ಬದಲು ಮುರಳೀಲೋಲನಾಗಿ ಬಿಟ್ಟಿದ್ದಾನೆ.

ಈಗ ರಾಧೆಯು ಮುರಳಿಯನ್ನು ಪ್ರತ್ಯೇಕವಾಗಿ ಮಾತನಾಡಿಸಲು ಯೋಚಿಸಿದ್ದಾಳೆ. ಅದಕ್ಕಾಗಿ ಸಮಯ ಕಾಯುತ್ತಿದ್ದಾಳೆ. ಅಂತಹ ಒಂದು ಅವಕಾಶ ಅವಳಿಗೆ ದೊರೆಯುತ್ತದೆ. ಒಂದು ಮಧ್ಯಾಹ್ನ ಶ್ರೀಕೃಷ್ಣ ತನ್ನ ಭೋಜನಮುಗಿಸಿ ಮಲಗಿ ವಿಶ್ರಾಂತಿಪಡೆಯುತ್ತಿದ್ದಾನೆ. ಅವನು ಮಲಗಿದ್ದ ತಲ್ಪದ ಸಮೀಪ ಮುರಳಿ ಇದೆ. ರಾಧೆ ಈ ಸಮಯವನ್ನುಪಯೋಗಿಸುತ್ತಾಳೆ. ಅವನಿಗೆ ನಿದ್ರೆ ಬಂದಿದೆ ಎಂದು ತಿಳಿದು. ಮುರಳಿಯ ಸಮೀಪಕುಳಿತು, ಕೈಮುಗಿದು "ಅಮ್ಮಾ ಮಾತಾ, ಮುರಳೀ, ಕೆಲವು ದಿನಗಳಿಂದ ನನ್ನನ್ನು ಒಂದು ಸಂಶಯ ಕಾಡುತ್ತಿದೆ. ಅದಕ್ಕೆ ನಿನ್ನಿಂದ, ಪರಿಹಾರ ಬಯಸಿ ಬಂದಿದ್ದೇನೆ" ಎನ್ನುತ್ತಾಳೆ. "ಅದೇನು ನಿನ್ನ ಸಂದೇಹ? ಕೇಳು ರಾಧೆ, ಸಂಕೋಚ ಪಡೇಡವೆನ್ನುತ್ತಾಳೆ" ಮುರಳಿ. "ನೋಡು ತಾಯಿ, ನಿನಗೆ ಗೊತ್ತಿರುವಂತೆ, ನಾನು ಶ್ರೀಕೃಷ್ಣನನ್ನು ಮನಸಾನ ಪ್ರೀತಿಸುತ್ತಿದ್ದೇನೆ. ಅವನನ್ನು ಅಗಲಿ ಅರೆಕ್ಷಣಕೂಡ ನಾನು ಜೀವಿಸಿರಲಾರೆ. ಅವನಿಗೂ ಹಾಗೆಯೇ ನಾನೆಂದರೆ ಅತಿಸ್ನೇಹಭಾವ. ನನ್ನ -- ಅವನ ಸಂಬಂಧ ಪವಿತ್ರವಾದುದು. ಆದರೆ ಅದೇಕೋ ಏನೋ ಕೃಷ್ಣ ಇತ್ತೀಚೆಗೆ ನನ್ನಿಂದ ದೂರವಾಗಿಯೇ ಉಳಿದಿದ್ದಾನೆ. ನನ್ನ ಹತ್ತಿರಬರುವುದೂ ಇಲ್ಲ. ನನ್ನ ಸಂಗಡ ಮಾತನಾಡಿಯೂ ಇಲ್ಲ. ಬಹುದಿನಗಳಿಂದ ನಾನೆಂದರೆ ಅವನಿಗೆ ಅನಾದರ ಮೂಡಿದೆ. ಅವನನ್ನು ಕಾಣದೇ ಬಹು ಸಂಕಟಪಡುತ್ತಿದ್ದೇನೆ. ಅವನೇಕೆ ಹೀಗೆ ನನ್ನನ್ನು ಕಾಡಿಸುತ್ತಿದ್ದಾನೆ?"

"ನನಗಂತೂ ತಿಳಿಯುತ್ತಿಲ್ಲ. ನೀನೇ ಹೇಳು. ಅವನಿಗೆ ನನ್ನನ್ನು ಬಿಟ್ಟರೆ ಬೇರೆ ಯಾರು ಇದ್ದಾರೆ? ಈ ಜಗತ್ತಿನಲ್ಲಿ ನನಗಿಂತ 'ಭಕ್ತ'ರು, ಅವನನ್ನು ಪ್ರೀತಿಸುವವರು ಬೇರೆ ಯಾರಾದರೂ ಇದ್ದಾರೆಯೇ? ನಾನೇ ಅವನಿಗೆ ಸರ್ವಸ್ವ. ನನ್ನನ್ನು ಬಿಟ್ಟು ಶ್ರೀಕೃಷ್ಣ ಈ ಜಗತ್ತಿನಲ್ಲಿ ಜೀವಿಸಿರಲಾರ. ಇಂತಹ ನನ್ನನ್ನು ದೂರಮಾಡಿ, ಇತ್ತೀಚೆಗೆ ನಿನ್ನನ್ನು ತನ್ನ ಬಳಿಯೇ ಸದಾ ಇಟ್ಟುಕೊಂಡಿರುತ್ತಾನೆ. ಅಮ್ಮಾ ಕೋಪಿಸಿಕೊಳ್ಳಬೇಡ. ನೀನಾದರೋ ಆರೇಳು ತೂತುಗಳುಳ್ಳ ಒಂದು ಬಿದಿರುತುಂಡು. ನಿನ್ನ ಒಳಗೆ ಏನೂ ಇಲ್ಲ. ನೀನು ನಿರ್ಜೀವ ವಸ್ತು. ಹೀಗಿರುವಾಗ ನಿನ್ನ ಮೇಲೆ ಏಕೆ ಇಷ್ಟು ಪ್ರೀತಿ ಆ ಕೃಷ್ಣನಿಗೆ? ಅದೇ ನನಗೆ ಅರ್ಥವಾಗದ ಸಮಸ್ಯೆಯಾಗಿದೆ. ಇದಕ್ಕೆ ನೀನೇ ಪರಿಹಾರ ಹೇಳಿ ನನ್ನ ಸಂಶಯವನ್ನು ದೂರಮಾಡು ತಾಯೇ" ಎಂದು, ಶ್ರೀಕೃಷ್ಣ ವಿರಹಿಯಾದ ರಾಧೆ ಮುರಳಿಯನ್ನು ವಿನಮ್ರಳಾಗಿ ಬೇಡುತ್ತಾಳೆ. ರಾಧೆಯ ಪ್ರಶ್ನೆಗೆ ಮುರಳಿಯ ಉತ್ತರ:-- ನನ್ನಲ್ಲಿ ಏನೂ ಇಲ್ಲವೆಂದೇ ಶ್ರೀಕೃಷ್ಣನನ್ನನ್ನು ಪ್ರೀತಿಸುತ್ತಿದ್ದಾನೆ. ಯಾವುದು ಇರಬಾರದಿತ್ತೋ ಅದು ನಿನ್ನೊಳಗೇ ಇದೆ. ಆದ್ದರಿಂದ ನಿನ್ನಿಂದ ದೂರ ವಿರಲು ಬಯಸುತ್ತಾನೆ ಕೃಷ್ಣ -- ಮುರಳಿಯ ಈ ಮಾತು ಅರ್ಥವಾಗಲಿಲ್ಲ ರಾಧೆಗೆ. ಸ್ವಲ್ಪ ಬಿಡಿಸಿ ಹೇಳು ಎಂದು ಕೇಳುತ್ತಾಳೆ. ಮುರಳಿಯು ತನ್ನ ಮಾತನ್ನು ಮುಂದುವರೆಸುತ್ತಾ, "ನೋಡು ರಾಧಾ -- ನೀನೇ ಹೇಳಿದೆಯಲ್ಲ. ನನಗಿಂತ ಭಕ್ತರು ಬೇರೆ ಇಲ್ಲ. ನಾನೇ ಅವನಿಗೆ ಸರ್ವಸ್ವ ಎಂದು. ಇದು ಅಹಂಕಾರ --ಮಮಕಾರ ಎನ್ನಿಸಿಕೊಳ್ಳುತ್ತದೆ. ಇದು ಕೇವಲ ದೇಹಭಾವ. ಅಹಂಕಾರಿಗೆ ಭಗವಂತನ ಸನ್ನಿಧಿಯಲ್ಲಿ ಜಾಗವಿಲ್ಲ. ಅವನ, ಎಂದರೆ ಭಕ್ತನ ಹೃದಯ ನಿಷ್ಕಲ್ಮಷವಾದ "ಪ್ರೇಮ" ದಿಂದ ತುಂಬಿರಬೇಕು. ನಿರ್ವಿಷಯವಾಗಿರಬೇಕು ಭಕ್ತಿ. ಭಗವಂತನು ಪ್ರೇಮ ಮೂರ್ತಿ. ಅವನ ಒಲುಮೆ ಗಳಿಸಬೇಕಾದರೆ ನೀನೂ ನನ್ನಂತೆಯೇ ಆಗ ಬೇಕು. ನನ್ನನ್ನು ನೋಡು. ನನ್ನೊಳಗೆ ಏನೂ ಇಲ್ಲವೆಂತಲೇ ನಾನು ಶ್ರೀ ಕೃಷ್ಣನ ಕೈಯ ವಾದ್ಯವಾಗಿದ್ದೇನೆ. ಅದೇ ನನಗೆ ಭಾಗ್ಯ. ನೀನೂ ನಿನ್ನ ಹೃದಯವನ್ನು ಕೊಳಲು ಮಾಡಿಕೊ. ಆಗ ನೋಡುವಿಯಂತೆ ಪ್ರೇಮದ, "ಪರಮ ಪ್ರೇಮದ ಸವಿ"ಯನ್ನು ಎಂದು ಮುರಳಿಯು ರಾಧೆಗೆ ಉಪದೇಶಿಸುತ್ತಾಳೆ.

ಉಪದೇಶ ಕೇಳುತ್ತಾ, ಕೇಳುತ್ತಾ ರಾಧೆಯ ಮನಸ್ಸು ನಿರ್ಮಲವಾಗುತ್ತದೆ. ಅಹಮಿಕೆಯು ಕರ್ಪೂರ ಕರಗಿದಂತೆ ಸಂಪೂರ್ಣ ಕರಗಿಬಿಡುತ್ತದೆ. ರಾಧೆಯೂ ಶ್ರೀಕೃಷ್ಣ ಪ್ರೇಮದಲ್ಲಿ ಕರಗಿ ಹೋಗುತ್ತಾಳೆ.

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ.

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ :--

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನು ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ. 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುಲವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ, ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ, (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು ಒಂದು ಬಾರಿಗೆ 10 ಶತಾಂಶ ದಂತೆ; ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ದೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ ಬರೆಯಿರಿ :

**ಕಾರ್ಯನಿರ್ವಹಣಾಧಿಕಾರಿ,**

ತಿ. ತಿ. ದೇ., ತಿರುಪತಿ.

# ಶ್ರೀ ವೇಂಕಟೇಶ ಸ್ತೋತ್ರಮ್

ಕಮಲಾಕುಚಚೂಚುಕಕುಂಕುಮತೋ
ನಿಯತಾರುಣಿತಾತುಲನೀಲತನೋ,
ಕಮಲಾಯತಲೋಚನ ಲೋಕಪತೇ
ವಿಜಯೀ ಭವ ವೇಂಕಟಶೈಲಪತೇ. ೧

ಯಾವ ಶ್ರೀದೇವಿಯ ಚೆಹ್ನೆಯಿಂದ ಪರಾತ್ಪರವಾದ ತತ್ತ್ವವನ್ನು ನಿರ್ಣಯಿಸಲು ತಾತ್ತ್ವಿಕರು ಸಮರ್ಥರಾಗುವರೋ, ಆ ದೇವಿಯ ವಕ್ಷ ಪ್ರದೇಶದ ಅಂಗರಾಗದಿಂದ ಅನವರತವೂ ಅರುಣವರ್ಣದಿಂದ ಶೋಭಿಸುವ ನೀಲ ಮೇಘದಂತಹ ಶರೀರದವನೂ, ಕಮಲದಳದಂತಹ ವಿಶಾಲ ನೇತ್ರದವನೂ, ಸಮಸ್ತ ಲೋಕಗಳ ಅಧಿಪತಿಯೂ ಆದ ಶ್ರೀವೇಂಕಟೇಶ! ನೀನು ಸರ್ವೋತ್ಕೃಷ್ಟನಾಗಿರು! ಪುರುಷೋತ್ತಮನಾಗಿರು.

ಸಚತುರ್ಮುಖಷಣ್ಮುಖಪಂಚಮುಖ--
ಪ್ರಮುಖಾಖಿಲದೈವತಮೌಳಿಮಣೇ,
ಶರಣಾಗತವತ್ಸಲ ಶೌರ್ಯನಿಧೇ
ಪರಿಪಾಲಯ ಮಾಂ ವೃಷಶೈಲಪತೇ. ೨

ಚತುರ್ಮುಖನಾದ ಬ್ರಹ್ಮ, ಆರುಮುಖಗಳುಳ್ಳ ಕುಮಾರಸ್ವಾಮಿ, ಐದು ಮುಖಗಳುಳ್ಳ ಈಶ್ವರನೇ ಮೊದಲಾದ ಸಮಸ್ತ ದೇವತೆಗಳಿಗೂ ಶಿರೋಮಣಿಯಾಗಿಯೂ, ಶರಣಾಗತರಾದವರಲ್ಲಿ ವಾತ್ಸಲ್ಯವುಳ್ಳವನಾಗಿಯೂ, ಶೌರ್ಯನಿಧಿಯಾಗಿಯೂ ಇರುವ ವೃಷಶೈಲಪತಿಯಾದ ವೇಂಕಟೇಶ! ನನ್ನನ್ನು ಪರಿಪಾಲಿಸು. ವೃಷಶೈಲಾಧಿಪನಾದ ಶ್ರೀವೇಂಕಟೇಶನನ್ನು 'ಶರಣಾಗತವತ್ಸಲ ಸಾರನಿಧೇ' -- ಎಂದು ಪರಿಪಾಲನ ಮಾಡುವ ವಿಷಯದಲ್ಲಿ ಸಂಬೋಧಿಸಿರುವುದು ಮೇಲಿನ ವಾತ್ಸಲ್ಯ ಮತ್ತು ಶೌರ್ಯರೂಪವಾದ ದಿವ್ಯ ಕಲ್ಯಾಣಗುಣಪರಿಪೂರ್ಣನಾದವನಿಂದ ಮಾತ್ರವೇ ಪರಿಪಾಲನವು ಸಾಧ್ಯವೆಂಬುದನ್ನು ಎತ್ತಿ ತೋರಿಸುತ್ತದೆ. ಕೇವಲ ವಾತ್ಸಲ್ಯವಿದ್ದು ಶೌರ್ಯವಿಲ್ಲದಿದ್ದರೆ ಆಶ್ರಿತರನ್ನು -- ಭೀತರನ್ನು ಪಾಲಿಸುವುದು ಸಾಧ್ಯವಿಲ್ಲ. ಹಾಗೆಯೇ ಶೌರ್ಯವಿದ್ದು, ವಾತ್ಸಲ್ಯವಿಲ್ಲದಿದ್ದರೂ ಪಾಲಿಸಲು ಸಾಧ್ಯವಿಲ್ಲ. ಪರಮಾತ್ಮನು ಈ ಎರಡು ಮಂಗಳ ಗುಣಗಳಿಂದಲೂ ಕೂಡಿದವನು. ವಾತ್ಸಲ್ಯವೆಂದರೆ ದೋಷಯುಕ್ತನಾದವನಲ್ಲಿಯೂ ಇರುವ ಪ್ರೇಮ. ಆಗ ತಾನೇ ಹುಟ್ಟಿರುವ ಕರುವಿನಲ್ಲಿ ತಾಯಿಯಾಗಿರುವ ಗೋವಿಗಿರುವಂತಹ ಪ್ರೇಮ: ಅಂದರೆ, ಆಗ ಅನೇಕ ಕಲ್ಮಷಗಳಿಂದ ಕೂಡಿರುತ್ತದೆ. ಆದರೆ ಮಾತೆಯಾದ ಗೋವು ಅದಾವುದನ್ನು ಲಕ್ಷಿಸದೆ -- ಅಸಹ್ಯಪಟ್ಟುಕೊಳ್ಳದೆ ಭೋಗ್ಯತಾ ಬುದ್ಧಿಯಿಂದ ಅದರ ಶರೀರವನ್ನು ಒಂದೇ ಸಮನಾಗಿ ನೆಕ್ಕಿ ಸ್ವಚ್ಛವಾಗಿ ಕೊಳೆಯಿಲ್ಲದಂತೆ ಮಾಡುತ್ತದೆ. ಇದೇ ವಾತ್ಸಲ್ಯವೆಂದು ಹಿರಿಯರ ಅಭಿಪ್ರಾಯ. ಅದರಂತೆಯೇ ದೋಷಯುಕ್ತವಾದ ಜೀವನದಲ್ಲಿಯೂ ಪರಮಾತ್ಮನು ತೋರಿಸುವ ಪ್ರೇಮವು ವಾತ್ಸಲ್ಯವೆನಿಸುತ್ತದೆ. ಇದನ್ನು ನಾವು ಶ್ರೀಮದ್ರಾಮಾಯಣದಲ್ಲಿ ವಿಭೀಷಣನ ಶರಣಾಗತಿಯ ಸಮಯದಲ್ಲಿ

# ಶ್ರೀವೇಂಕಟೇಶ್ವರ ಸುಪ್ರಭಾತ



ಕಾಣಬಹುದು. ಶತ್ರುವಾದ ರಾವಣನ ತಮ್ಮನಾಗಿದ್ದರೂ ಪ್ರಪನ್ನನಾಗಿ ವಿಭೀಷಣನಿಗೆ ಅಭಯವನ್ನು ನೀಡುತ್ತಾನೆ ತನ್ನ ಆಶ್ರಿತ ವಾತ್ಸಲ್ಯವನ್ನು ವ್ಯಕ್ತಪಡಿಸುತ್ತಾನೆ.

ಸಕೃದೇವ ಪ್ರಪನ್ನಾಯ ತವಾಽಸ್ಮೀತಿ ಚ ಯಾಚತೇ
ಅಭಯಂ ಸರ್ವಭೂತೇಭ್ಯೋದದಾಮ್ಯೇತದ್ವ್ರತಂ ಮಮ

ಅನಯ್ಯೈನಂ ಹರಿಶ್ರೇಷ್ಠ ದತ್ತಮಸ್ಯಾಽಭಯಂ ಮಯಾ
ವಿಭೀಷಣೋ ವಾ ಸುಗ್ರೀವ ಯದಿ ವಾ ರಾವಣಃ ಸ್ವಯಮ್

ಎನ್ನುತ್ತಾನೆ. ಪ್ರಪತ್ತಿಯು ಮಾನಸಿಕವೇ ಆಗಲಿ, ವಾಚಿಕವೇ ಆಗಲಿ ಒಂದೇ ಒಂದು ಸಾರಿಯಾದರೂ ಪ್ರಕಟಿಸಲ್ಪಟ್ಟರೆ, ಅವನಿಗೂ, ಅವನ ಸಂಬಂಧಿಕರಿಗೂ -- ಯಾರಿಗಾದರೂ ಅಭಯವನ್ನು ಕೊಡುವುದೇ ನನ್ನ ವ್ರತ. ಎಲೈ ಕಪಿಶ್ರೇಷ್ಠ! ಅವನನ್ನು ಕರೆದುಕೊಂಡು ಬಾ; ಅವನು ವಿಭೀಷಣನೇ ಆಗಲಿ, ಅಥವಾ ಸ್ವಯಂ ರಾವಣನೇ ಆಗಲಿ, ಅಭಯವುಂಟು -- ಎನ್ನುವ ವಾತ್ಸಲ್ಯೈಕ ಪರಾಯಣತೆಯೂ ಶೌರ್ಯ ನಿಧಿತ್ವವೂ, ಜಗದೇಕ ಧನುರ್ಧರನಾದ ಶ್ರೀ ರಾಮಚಂದ್ರನಲ್ಲಿ ಅಲ್ಲದೆ ಮತ್ತೆಲ್ಲಿಯೂ ಕಂಡು ಬರಲಾರದು. ಹೀಗೆ ಶ್ರೀ ರಾಮಚಂದ್ರನಿಂದ ಕೊಡಲ್ಪಡುವ ಅಭಯವು ಮೋಕ್ಷವೆನಿಸುವುದು.

ಅಥ ಸೋಽಭಯಂ ಗತೋ ಭವತಿ, ಆನಂದಂ
ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚನೇತಿ

--ಎಂಬ ಶ್ರುತಿಯೂ ಇದೇ ಅರ್ಥವನ್ನು ಪ್ರತಿಪಾದಿಸುತ್ತದೆ. ಆದುದರಿಂದ 'ಆಶ್ರಿತ ವಾತ್ಸಲ್ಯೈಕಜಲಧಿ'ಯಾದ ಶ್ರೀ ವೇಂಕಟೇಶ! ನನ್ನನ್ನು ಪರಿಪಾಲಿಸು -- ಎಂದು ಪ್ರಾರ್ಥಿಸಿರುವುದು ಅತ್ಯಂತ ರಮಣೀಯವಾಗಿದೆ.

ಅತಿವೇಲತಯಾ ತವ ದುರ್ವಿಷಹೈ
ರನುವೇಲಕೃತೈರಪರಾಧಶತೈಃ,

ಭರಿತಂ ತ್ವರಿತಂ ವೃಷಶೈಲಪತೇ
ಪರಯಾ ಕೃಪಯಾ ಪರಿಪಾಹಿ ಹರೇ. ೩

ನಾನು ಮಾಡಿರುವ ಅಪರಾಧಗಳು ಗಣನಾತೀತವಾದವು. ಆದುದರಿಂದಲೇ ನಿನ್ನಿಂದ ಸಹಿಸಲೂ ಕಷ್ಟವಾದವು. ಅಂತಹ ಅಪರಾಧಗಳಿಂದ ತುಂಬಿಕೊಂಡಿರುವ ನನ್ನನ್ನು ಹೇ ವೃಷಾಚಲಪತೇ, ಹರೇ! ಕಾಲವಿಳಂಬ ಮಾಡದೆ ಪರಮ ಕರುಣೆಯಿಂದ ಕಾಪಾಡು.

ಹರಿರ್ಹರತಿ ಪಾಪಾನಿ ದುಷ್ಟಚಿತ್ತೈರಪಿ ಸ್ಮೃತಃ
ಅನಿಚ್ಛಯಾಪಿ ಸಂಸ್ಪೃಷ್ಟೋ ದಹತ್ಯೇವ ಹಿ ಪಾವಕಃ

--ಎಂದರೆ, ತಿಳಿಯದೆ ಮುಟ್ಟಿದರೂ ಬೆಂಕಿಯು ಹೇಗೆ ಕೈಯನ್ನು ಸುಡುವುದೋ, ಹಾಗೆಯೇ ಪಾಪಾತ್ಮರಾದ ನಾವು ಇಷ್ಟವಿಲ್ಲದೆಯೇ ಹರಿಯನ್ನು ಸ್ಮರಿಸಿದರೂ ಅವನು ಪಾಪಗಳನ್ನು ಪರಿಹರಿಸುತ್ತಾನೆ -- ಎಂದ ಮೇಲೆ ಪಾಪಯುಕ್ತನಾದರೂ ಪಶ್ಚಾತ್ತಾಪತಪ್ತನಾಗಿ, ದೋಷದೂರನಾದ ಪರಮಾತ್ಮನನ್ನು ಆಶ್ರಯಿಸಿದರೆ ಮುಕ್ತನಾಗುವುದರಲ್ಲಿ ಸಂದೇಹವೇ ಇಲ್ಲ. ಏಕೆಂದರೆ, ಪಾಪಮಾಡುವುದು ಜೀವನ ಸ್ವಭಾವ ಹೇಗೋ, ಹಾಗೆಯೇ ಪಾಪಗಳನ್ನು ಪರಿಹರಿಸುವುದೂ ಅವ್ಯಾಜಕರುಣಾಮೂರ್ತಿಯಾದ ಪರಮಾತ್ಮನ ಸ್ವಭಾವ. 'ತ್ವರಿತಂ' --ಎಂದರೆ 'ಬೇಗ' ನನ್ನನ್ನು ಕಾಪಾಡು --ಎನ್ನುವುದರಿಂದ ಪ್ರಪನ್ನನು ಆರ್ತನೆಂದು ವ್ಯಕ್ತವಾಗುತ್ತದೆ. ಆರ್ತನೆಂದರೆ ಆಶ್ರಯವನ್ನು ಪಡೆಯುವುದರಲ್ಲಿ ಕಾಲವಿಳಂಬವನ್ನು ಸಹಿಸಲಾರದವನು ಎಂದರ್ಥ. ಪರಮಾತ್ಮನಾದರೋ ಆರ್ತತ್ರಾಣಪರಾಯಣನು. ಆದುದರಿಂದಲೇ ಕರಿರಾಜನ ಆರ್ತಧ್ವನಿಯನ್ನು ಕೇಳಿದೊಡನೆಯೇ ಹೇಗೆ ಓಡಿ ಬಂದು ಕಾಪಾಡಿದೆಯೋ ಅಂತಹ ಅವ್ಯಾಜ ಕರುಣೆಯಿಂದ ನನ್ನನ್ನೂ ಕಾಪಾಡು. ನನಗಿಂತಲೂ ಆರ್ತರು ಮತ್ತೊಬ್ಬರಿಲ್ಲ; ನಿನಗಿಂತಲೂ ಆರ್ತತ್ರಾಣಪರಾಯಣರು ಮತ್ತೊಬ್ಬರಿಲ್ಲವೆಂಬುದೂ ಇದರ ಅಭಿಪ್ರಾಯ.

ಅಧಿವೇಂಕಟಶೈಲಮುದಾರವತೇ--
ರ್ಜನತಾಭಿಮತಾಧಿಕದಾನರತಾತ್,
ಪರದೇವತಯಾ ಗದಿತಾನ್ನಿಗಮೈಃ
ಕಮಲಾದಯಿತಾನ್ನ ಪರಂ ಕಲಯೇ. ೪

ಶ್ರೀ ವೇಂಕಟಾಚಲದಲ್ಲಿ ವಾಸರಸಿಕನಾಗಿ, ಪರಮೌದಾರ್ಯದಿಂದ ಕೂಡಿ ಜನತೆಯ ಅಭಿಮತಕ್ಕಿಂತಲೂ ಅಧಿಕವಾಗಿ ದಾನಶೀಲನಾಗಿರುವ, ಶ್ರುತಿಗಳಿಂದ ಪರದೇವತೆ ಎಂದು ಹೇಳಲ್ಪಟ್ಟಿರುವ ಶ್ರೀಯಃಪತಿಯಾದ ಶ್ರೀಮನ್ನಾರಾಯಣನನ್ನು ಬಿಟ್ಟು ಮತ್ತೆ ಯಾರನ್ನೂ ಆಶ್ರಯಿಸುವುದಿಲ್ಲ. ಶ್ರೀ ವೇಂಕಟೇಶ್ವರ ಸ್ವರೂಪದಿಂದಿರುವ ಶ್ರೀಮನ್ನಾರಾಯಣನೇ ನನಗೆ ಆಶ್ರಯವೆಂದು ಇದರ ಅರ್ಥ.

ಮಾಯಾವೀ ಪರಮಾನಂದಂ ತ್ಯಕ್ತ್ವಾ ವೈಕುಂಠ ಮುತ್ತಮಮ್
ಸ್ವಾಮಿಪುಷ್ಕರಿಣೀತೀರೇ ರಮಯಾ ಸಹ ಮೋದತೇ

--ಎಂದರೆ, ಮಾಯೆಯನ್ನು ಸೃಜಿಸುವ ನಾರಾಯಣನು ಪರಮಾನಂದಕರವಾದ ವೈಕುಂಠವನ್ನೂ ಬಿಟ್ಟು ರಮಾದೇವಿಯೊಡನೆ ಸ್ವಾಮಿಪುಷ್ಕರಿಣೀ ತೀರದಲ್ಲಿ ವಿಹರಿಸುತ್ತಿರುವನು. ಭಕ್ತರ ಇಷ್ಟಾರ್ಥಗಳನ್ನು ಈಡೇರಿಸುವ ಕಾರಣದಿಂದಲೇ ಆತನು ವೇಂಕಟಾಚಲದಲ್ಲಿ ನೆಲೆಸಿರುವನು. ಪುತ್ರಕಳತ್ರ ರಾಜ್ಯಾದಿ ಪ್ರಾಪ್ತಿಗಳು ಅವನ ಔದಾರ್ಯವನ್ನು ತೋರಿಸುವ ಮಹಿಮಾ ವಿಶೇಷಗಳು. ಗುರು, ಹಿರಿಯರೂ, ರಾಜ ಮಹಾರಾಜರೂ, ವೀರಾಧಿ ವೀರರೂ, ಶಾಸ್ತ್ರಪರಿಣತರೂ, ವ್ಯವಹಾರ ಚತುರರೂ ಸೇರಿರುವ ಮಹಾಸಭೆಯಲ್ಲಿ ವೀರರಾದರೂ ಧರ್ಮಪಾಶಕ್ಕೆ ಕಟ್ಟು ಬಿದ್ದು, ಅಸಹಾಯಕರಾಗಿರುವ ಯುಧಿಷ್ಠಿರನೇ ಮೊದಲಾದ ಐವರು ಪತಿಗಳಿದ್ದರೂ ಅನಾಥೆಯಂತಿರುವ, ರಜಸ್ವಲೆಯಾದ ಪಾಂಚಾಲಿಯ ಮೊರೆಯನ್ನು ಕೇಳಿದವರಾರು? ಪರಮೋದಾರನಾದ ಪುಂಡರೀಕಾಕ್ಷನಾದ ಗೋವಿಂದನಲ್ಲದೆ ಮತ್ತೆ ಯಾರೂ ಅವಳನ್ನು ರಕ್ಷಿಸಲಿಲ್ಲ. ಅವನ ಔದಾರ್ಯವನ್ನು ಎಷ್ಟೆಂದು ಹೇಳೋಣ! ಇದು ಅವನ ಔದಾರ್ಯಕ್ಕೆ ಒಂದು ನಿದರ್ಶನವಾಯಿತು. 'ನಿಗಮ ಗದಿತ' ನೆನ್ನುವುದರಿಂದ -- 'ತ್ವಮೀಶ್ವರಾಣಾಂ ಪರಮಂ ಮಹೇಶ್ವರಂ ತ್ವಂ ದೇವತಾನಾಂ ಪರಮಂ ಚ ದೈವತಮ್' 'ಯತೋ ವಾ ಇಮಾನಿ ಭೂತಾನಿ ಜಾಯಂತೇ ಯೇನ ಜಾತಾನಿ ಜೀವನ್ತಿ, ಯತ್ಪ್ರಯಂತ್ಯಭಿಸಂವಿಶಂತಿ, ತದ್ವಿಜಿಜ್ಞಾಸಸ್ವ, ತದ್ ಬ್ರಹ್ಮೇತಿ' -- 'ಸದೇವ ಸೋಮ್ಯೇದಮಗ್ರ ಆಸೀತ್', 'ಏಕಮೇವಾ ದ್ವಿತೀಯಂ ಬ್ರಹ್ಮ', 'ಯಸ್ಸರ್ವಜ್ಞಸ್ಸರ್ವವಿತ್', 'ಪರಾಽಸ್ಯಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ', 'ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ', 'ಏಷ ಸರ್ವಭೂತಾಂತರಾತ್ಮಾ ಅಪಹತಪಾಪ್ಮಾದಿವ್ಯೋ ದೇವ ಏಕೋ ನಾರಾಯಣಃ' --ಇತ್ಯಾದಿ ನೂರಾರು ಶ್ರುತಿಗಳಿಂದ ಉದ್ಘೋಷಿಸಲ್ಪಟ್ಟ ವೈಶಿಷ್ಟ್ಯವುಳ್ಳವನೆಂಬುದು ವ್ಯಕ್ತವಾಗುತ್ತದೆ.

ಕಲವೇಣುರವಾವಶಗೋಪವಧೂ--
ಶತಕೋಟಿವೃತಾತ್ ಸ್ಮರಕೋಟಿಸಮಾತ್,
ಪ್ರತಿವಲ್ಲವಿಕಾಭಿಮತಾತ್ ಸುಖದಾತ್
ವಸುದೇವಸುತಾನ್ನ ಪರಂ ಕಲಯೇ. ೫

ಅವ್ಯಕ್ತ ಮಧುರವಾದ ಕೊಳಲಿನ ಮಧುರವಾದ ಧ್ವನಿಯಿಂದಲೇ ವಶೀಭೂತರಾದ ಅಪರಿಮಿತ ಗೋಪವನಿತೆಯರಿಂದ ಸುತ್ತುವರಿಯಲ್ಪಟ್ಟವನೂ, ಕೋಟಿ ಮನ್ಮಥರ ಲಾವಣ್ಯವುಳ್ಳವನೂ, ಪ್ರತಿ ಗೋಪಿಯರಿಗೂ ಅಭಿಮತನಾಗಿಯೂ, ಎಲ್ಲರಿಗೂ, ಸುಖವನ್ನು ಕೊಡುವವನಾಗಿಯೂ ಇರುವ ವಸುದೇವ ಸುತನಾದ ಶ್ರೀಕೃಷ್ಣನಲ್ಲದೆ ನಾನು ಮತ್ತೆ ಯಾರನ್ನೂ ಧ್ಯಾನಿಸುವುದಿಲ್ಲ. ಈ ಪದ್ಯದಲ್ಲಿ ಪರವಾಸುದೇವನ ಸೌಲಭ್ಯ ಗುಣವು ಅತ್ಯಂತ ಮನೋಹರವಾಗಿ ವರ್ಣಿತವಾಗಿದೆ. ತ್ರೇತಾಯುಗದಲ್ಲಿ ಶ್ರೀ ರಾಮಚಂದ್ರನಾಗಿ ಅವತರಿಸಿ, ದಶರಥನ ಮನೋರಥವನ್ನು ಈಡೇರಿಸಿ, ರಾಕ್ಷಸ ಬಾಧೆಯಿಂದ ಪೀಡಿತರಾದ ತಪೋಧನರನ್ನು ರಕ್ಷಿಸುವ ಉದ್ದೇಶದಿಂದ ದಂಡಕಾರಣ್ಯಕ್ಕೆ ಹೋಗುವನು. ಖರದೂಷಣಾದಿ ರಾಕ್ಷಸ ಸಮೂಹ ವನ್ನು ವಧಿಸಿ ಬಂದ ಅಪ್ರತಿಮ ಶೂರನೂ, ಪರಮ ಸುಂದರನೂ ಆದ ಶ್ರೀ ರಾಮನನ್ನು ನೋಡಿ ಅವನ ಮನೋಹರ ರೂಪವನ್ನು ನೋಡಿ, ತಪೋಧನರು ಆತನ ಆಲಿಂಗನದ ಸುಖವನ್ನು ಬಯಸಿದರಂತೆ. 'ಪುಂಸಾಂ ಮೋಹನ ರೂಪ' -- ನಾದ ಅವನ ಆ ದಿವ್ಯರೂಪವು ಅವರನ್ನು ತಲ್ಲಣಗೊಳಿಸಿತಂತೆ. ಅದರ ಫಲವಾಗಿ ದ್ವಾಪರಯುಗದಲ್ಲಿ ಆ ತಪೋಧನರೆಲ್ಲರೂ ಗೋಪವನಿತೆಯರಾಗಿ ಜನಿಸಿ, ಮೋಹನಾಕಾರನಾದ ವಸುದೇವ ಸುತನಾದ ಶ್ರೀಕೃಷ್ಣನನ್ನು ಪಡೆದು ತಮ್ಮ ಜನ್ಮವನ್ನು ಸಾರ್ಥಕಪಡಿಸಿಕೊಂಡರಂತೆ. ಇದೊಂದು ಐತಿಹ್ಯದಿಂದ ಗೀತೆಯಲ್ಲಿ ಹೇಳಿರುವಂತೆ--

ಬಹೂನಾಂ ಜನ್ಮನಾಮಂತೇ ಜ್ಞಾನವಾನ್ ಮಾಂ ಪ್ರಪದ್ಯತೇ

ವಾಸುದೇವಸ್ಸರ್ವಮಿತಿ ಸ ಮಹಾತ್ಮಾಸುದುರ್ಲಭಃ

--ಎಂದರೆ, ಆರ್ತನೂ, ಜಿಜ್ಞಾಸುವೂ, ಅರ್ಥಾರ್ಥಿಯು ಮತ್ತು ಜ್ಞಾನಿಯೂ ನನ್ನನ್ನು ಆಶ್ರಯಿಸುತ್ತಾರೆ; ಅವರಲ್ಲಿ ಪರಮಭಕ್ತಿಯುಳ್ಳ ಜ್ಞಾನಿಯೇ ಸರ್ವ ಶ್ರೇಷ್ಠನು. ವಾಸುದೇವನೇ ಸರ್ವಸ್ವವೆಂದು ನಂಬಿ ಆಶ್ರಯಿಸುವ ಮಹಾತ್ಮನು ದುರ್ಲಭ; ಅಂತಹ ಜ್ಞಾನಿಯೂ ಅನೇಕ ಜನ್ಮಗಳನ್ನು ಕಳೆದು ಕೊನೆಗೆ ನನ್ನಲ್ಲಿ ಪ್ರಪನ್ನನಾಗುತ್ತಾನೆ -- ಎಂದು ತಿಳಿಸಿರುವಂತೆ ಆ ತಪೋಧನರು ಜನ್ಮಾಂತರ ಸುಕೃತಿ ವಿಶೇಷದಿಂದ ಗೋಪವನಿತೆಯರಾಗಿ ಜನಿಸಿ, ಶುದ್ಧ ಪ್ರೇಮದಿಂದ ವಾಸುದೇವನೇ ಸರ್ವಸ್ವವೆಂದು ನಂಬಿ ಮುಕ್ತರಾದರು.

ಹಿಂದಿನ ಯುಗದಲ್ಲಿ ದಶರಥನ ಇಷ್ಟಾರ್ಥವನ್ನು ನೆರವೇರಿಸಿದಂತೆ ದ್ವಾಪರ ಯುಗದಲ್ಲಿಯೂ ವಸುದೇವ ದೇವಕಿಯರ ಮನೋರಥವನ್ನು ಸಲ್ಲಿಸಲು ಅವರ ಪುತ್ರನಾಗಿ ಅವತರಿಸಿ, ತನ್ನ ಸೌಲಭ್ಯವನ್ನು ಪ್ರದರ್ಶಿಸಿದನು. 'ವಿಶ್ವರೂಪ'ನಾಗಿ ಪ್ರತಿಗೋಪಿಗೂ ಅಭಿಮತನಾದನು; ಶಾಶ್ವತ 'ಸುಖ'ವನ್ನು ಕರುಣಿಸಿ, ಅನನ್ಯ ಶರಣನಾದನು, ಆದುದರಿಂದಲೇ -- 'ಏಕೋ ದೇವೋ ದೇವಕೀ ಪುತ್ರ ಏವ' ಎಂದು ಭಜಿಸುವವರಿಗೆ ಏಕಮಾತ್ರನಾದ ಆಶ್ರಯವಾದನು. ಆದ್ದರಿಂದ ಅಂತಹ ವಸುದೇವ ಸುತನನ್ನು ಬಿಟ್ಟು ನಾನು ಯಾರನ್ನೂ ಭಜಿಸುವುದಿಲ್ಲವೆಂಬುದು ರಮಣೀಯವಾದುದು--

ಅಭಿರಾಮ ಗುಣಾಕರ ದಾಶರಥೇ
ಜಗದೇಕ ಧನುರ್ಧರ ಧೀರಮತೇ,
ರಘುನಾಯಕ ರಾಮ ರಮೇಶ ವಿಭೋ
ವರದೋ ಭವ ದೇವ ದಯಾಜಲಧೇ. ೬

ಹಿಂದಿನ ಪದ್ಯದಲ್ಲಿ ಶ್ರೀ ವೇಂಕಟೇಶ್ವರನನ್ನು ಶ್ರೀಕೃಷ್ಣಾವತಾರದ ಮಹಿಮೆಯಿಂದ ಸ್ತುತಿಸಿದ ಕವಿ ಇಲ್ಲಿಂದ ಮುಂದೆ ಮೂರು ಪದ್ಯಗಳಿಂದ ಶ್ರೀ ರಾಮಾವತಾರದ ಗುಣಗಳನ್ನು ವರ್ಣಿಸುತ್ತಾನೆ. ದಶರಥ ಪುತ್ರನಾಗಿಯೂ ಸಕಲ ಸಲ್ಯಾಣ ಗುಣಗಳಿಗೂ ಆಕರನಾಗಿಯೂ, ಸಮಸ್ತ ಪ್ರಪಂಚದಲ್ಲೆಲ್ಲ ಏಕಮಾತ್ರ ಧನುರ್ಧಾರಿಯಾಗಿಯೂ, ಲೋಕೈಕ ವೀರನಾಗಿಯೂ, ರಘುವಂಶವೆಂಬ ಮಾಲೆಯಲ್ಲಿ ನಾಯಕಮಣಿಯಾಗಿಯೂ, ಶ್ರಿಯಃ ಪತಿಯಾಗಿಯೂ, ಕರುಣಾಸಮುದ್ರನಾಗಿಯೂ ಇರುವ ದೇವ ದೇವ! ಪ್ರಸನ್ನನಾಗು. ಪರಮಾತ್ಮನ ಅನಂತವಾದ ಅವತಾರಗಳಲ್ಲಿ ಶ್ರೀರಾಮಾವತಾರವು ಅಮೋಘವೂ, ಪರಿಪೂರ್ಣವೂ ಆದರ್ಶವೂ ಆದುದು. ಶ್ರೀರಾಮನು ಅಭಿರಾಮಗುಣಾಕರನು. ಆತನ ಕಲ್ಯಾಣ ಗುಣಗಳನ್ನು ವರ್ಣಿಸಲು ಸಮರ್ಥನಾದ ವಾಲ್ಮೀಕಿಯೇ ಧನ್ಯನು. ಮೊದಲಿನಿಂದ ಕೊನೆಯವರೆಗೂ ಶ್ರೀಮದ್ರಾಮಾಯಣದಲ್ಲಿ ರಾಮನ ಮಂಗಳ ಗುಣಗಳನ್ನು ಕಾಣಬಹುದು. ವಿಸ್ತೃತವಾಗುವುದೆಂಬ ಭಯದಿಂದ ಇಲ್ಲಿ ಒಂದೆರಡು ಉದಾಹರಣೆಗಳಿಂದ ಮಾತ್ರ ಆದರ್ಶವಾದ ಗುಣಗಳನ್ನು ತೋರಿಸುವ ಪ್ರಯತ್ನ ಮಾಡಲಾಗಿದೆ. ಆಚಾರ್ಯರೊಬ್ಬರು ಹೇಳಿರುವಂತೆ ಶ್ರೀರಾಮನ ವಿಜಯಕ್ಕೆ ಕಾರಣ ಆತನ ಸತ್ಯನಿಷ್ಠೆ ಮತ್ತು ದಾನಶೀಲತೆ. ಆಚಾರ್ಯರು ಇದನ್ನೇ ಪ್ರತಿಪಾದಿಸುತ್ತ--

ಸತ್ಯೇನ ಲೋಕಾನ್ ಜಯತಿ ದೀನಾನ್ ದಾನೇನ ರಾಘವಃ
ಗುರೂನ್ ಶುಶ್ರೂಷಯಾ ವೀರೋಧನುಷಾ ಯುಧಿ ಶಾತ್ರವಾನ್

ಎಂದರು. ಶ್ರೀರಾಮನು ಮನುಷ್ಯರ ಮಧ್ಯದಲ್ಲಿ ಮನುಷ್ಯನಾಗಿ ಹುಟ್ಟಿದ್ದರೂ, ತನ್ನನ್ನು ತಾನು 'ಆತ್ಮಾನಂ ಮಾನುಷಂ ಮನ್ಯೇ' --ಎಂದು ಹೇಳಿಕೊಂಡಿದ್ದರೂ, 'ರಾಮೋ ದ್ವಿರ್ನಾಭಿಭಾಷತೇ' --ಎಂದು ತಾನೇ ಹೇಳಿಕೊಂಡಿರುವಂತೆ ತನ್ನ ಸತ್ಯನಿಷ್ಠೆಯಿಂದ ಲೋಕಗಳನ್ನು ಗೆಲ್ಲುತ್ತಾನೆ. ಸತ್ಯ ಸ್ವರೂಪಿಯಾದ ಪರಮಾತ್ಮನ ದಿವ್ಯವೂ, ಮಂಗಳಕರವೂ, ಆದ ಗುಣವಿದು. ಆತನ ದಾನಶೀಲತೆಗೆ ಒಂದೇ ಒಂದು ಘಟನೆಯನ್ನು ವಿವರಿಸಿದರೆ ಸಾಕೆಂದು ತೋರುತ್ತದೆ. ಶ್ರೀರಾಮನು ಪಿತೃವಾಕ್ಯ ಪರಿಪಾಲನೆಗಾಗಿ ಕಾಡಿಗೆ ಹೊರಡುವುದಕ್ಕೆ ಮೊದಲು ಅನೇಕ ದಾನಗಳನ್ನು ಮಾಡುತ್ತಾನೆ. ಅವುಗಳಲ್ಲಿ ಗೋದಾನವೂ ಒಂದು. ಗಾಳಿಯು ಸ್ವಲ್ಪ ಬೀಸಿದರೂ ಎಲ್ಲಿ ತೂರಿ ಹೋಗುವನೋ ಎಂಬಂತಿರುವ ಜೀರ್ಣಕಾಯನಾದ ದ್ವಿಜನೊಬ್ಬನು ರಾಮನನ್ನು ನೋಡಲು ಬರುತ್ತಾನೆ. ರಾಮನು ಆತನನ್ನು ನೋಡಿ 'ಅಯ್ಯಾ ವಿಪ್ರಶ್ರೇಷ್ಠಾ! ನಿನ್ನ ಕೈಯಲ್ಲಿರುವ ಕೋಲನ್ನು ನಿನ್ನ ಶಕ್ತಿಯೆಲ್ಲವನ್ನೂ ಉಪಯೋಗಿಸಿ ದೂರಕ್ಕೆ ಎಸೆ. ಇದೋ ಅಲಂಕೃತವಾದ ಗೋವುಗಳು ಸಾಲಾಗಿ ನಿಂತಿವೆ. ಈ ಸಾಲುಗಳಲ್ಲಿ ನಿನ್ನ ಕೋಲು ಎಲ್ಲಿಯವರೆಗೆ ಹೋಗುವುದೋ ಆ ಗೋವುಗಳೆಲ್ಲ ನಿನ್ನವು' --ಎನ್ನುತ್ತಾನೆ. ಈ ದಾನದ ವೈಖರಿಯನ್ನು ನೋಡಿ! ಎಷ್ಟು ಮನೋಹರವಾಗಿದೆ! ಇದಕ್ಕಿಂತಲೂ ಉತ್ತಮವಾದ ದಾನದ ನಿದರ್ಶನಗಳಿದ್ದರೂ ಇದರಲ್ಲಿ ಮತ್ತೊಂದು ವಿಶೇಷ ಇದೆ. ದಾನಶೀಲತೆಯು ಮಾತ್ರವಲ್ಲದೆ ಕಾಡಿಗೆ ಹೋಗಬೇಕಾದ ಪ್ರಸಂಗ ಒದಗಿದರೂ ಆತನ ಮನಸ್ಸಿನಲ್ಲಿನ ಸ್ಥೈರ್ಯ; ಪ್ರಸನ್ನತೆ, ಪರಿಹಾಸ ಶೀಲತೆ, ಯೋಜನೆಯಿಂದ ಕೂಡಿರುವ ಗಾಂಭೀರ್ಯವೇ ಮೊದಲಾದ ಸುಂದರವಾದ ಗುಣಗಳು ಕಂಡು ಬರುತ್ತವೆ. ಅದರಿಂದಲೇ ಶ್ರೀರಾಮನು 'ಅಭಿರಾಮಗುಣಾಕರ', ಧೀರಮತಿ; ಧೈರ್ಯವೆಂದರೆ ಎಂತಹ ಕಠೋರ ಸ್ಥಿತಿಯಲ್ಲಿಯೂ ತನ್ನ ಧರ್ಮವನ್ನು ಬಿಡದಿರುವಿಕೆ. ಅದನ್ನು ಶ್ರೀರಾಮನ ಚರಿತ್ರೆಯಲ್ಲಿ ನಾವು ಹೆಜ್ಜೆ ಹೆಜ್ಜೆಗೂ ಕಾಣಬಹುದು. 'ರಾಮ' --ಎಂಬ ಹೆಸರಂತೂ ಅತ್ಯಂತ ಅಭಿರಾಮವಾದುದು. 'ರಮನ್ತೇಯೋಗಿನಃ ಅಸ್ಮಿನ್ನಿತಿ ರಾಮಃ' --ಎಂದರೆ ಯಾವನನ್ನು ತಾರಕ ಬ್ರಹ್ಮವನ್ನಾಗಿ ತಿಳಿದು ಯೋಗಿಗಳು ಆತ್ಮಾರಾಮರಾಗಿ, ಯಾವನಲ್ಲಿ ಮನಸ್ಸನ್ನು ವಿಹಾರಗೊಳಿಸುವರೋ ಅವನೇ ರಾಮನು. ಇದನ್ನೇ ಇನ್ನೂ ಸ್ಪಷ್ಟವಾಗಿ ಹೇಳಿದರೆ 'ರಮನ್ತೇ ಯೋಗಿನೋಽನಂತೇ ಸತ್ಯಾನಂದೇ ಚಿದಾತ್ಮನಿ' -- ಸಚ್ಚಿದಾನಂದಾತ್ಮಕನಾದ ಪರಬ್ರಹ್ಮ ಸ್ವರೂಪಿಯಾದ ರಾಮನಲ್ಲಿ ಯಾವ ಯೋಗಿಗಳು ವಿಹರಿಸುವರೋ ಅಂತಹ ಜಗನ್ಮಂಗಳಕರವಾದ ಅಭಿಧಾನವುಳ್ಳವನು. ಅಂತಹ ಪರಮ ದಯಾಳುವೂ, ಆಶ್ರಿತ ವತ್ಸಲನೂ ಆದ ರಾಮನು ಅನುಗ್ರಹಿಸುವುದು ಆತನ ಸ್ವಾಭಾವಿಕವಾದ ಗುಣವಲ್ಲವೆ!

ಅವನೀತನಯಾ ಕಮನೀಯಕರಂ
ರಜನೀಕರ ಚಾರುಮುಖಾಂಬುರುಹಮ್,
ರಜನೀಚರರಾಜ ತಮೋಮಿಹಿರಂ
ಮಹನೀಯ ಮಹಂ ರಘುರಾಮಮಯೇ. ೭

ಹಿಂದಿನ ಪದ್ಯದಲ್ಲಿ ಶ್ರೀ ರಾಮನ ಅನನ್ಯಸಾಧಾರಣಗುಣಗಳನ್ನು ವರ್ಣಿಸಿ, ಈ ಪದ್ಯದಲ್ಲಿಯೂ, ಆತನ ಸ್ವರೂಪ ಸ್ವಭಾವ ಗುಣಗಳನ್ನು ಚಿತ್ರಿಸಿ, ಆತನನ್ನೇ ರಕ್ಷಕನನ್ನಾಗಿ ಭಾವಿಸುತ್ತಾರೆ--

ಸೀತಾದೇವಿಯ ಸಂಪರ್ಕದಿಂದ ಮನೋಹರನೂ, ಚಂದ್ರನಂತೆ ಆಹ್ಲಾದಕರವಾದ ಮುಖಕಮಲವುಳ್ಳವನೂ, ರಾಕ್ಷಸ ರಾಜನೆಂಬ ಅಂಧಕಾರಕ್ಕೆ ಸೂರ್ಯನೂ, ಮಹಾಮಹಿಮನೂ ಆಗಿರುವ ರಘುರಾಮನನ್ನು ರಕ್ಷಕನನ್ನಾಗಿ ಆಶ್ರಯಿಸುತ್ತೇನೆ. ನಾವು ಶ್ರೀರಾ

ಮನನ್ನು ದಶರಥ ಪುತ್ರನೆಂದು ಅಲ್ಲ -- ಸಾಕ್ಷಾತ್ ನಾರಾಯಣನೆಂದು ತಿಳಿದಿದ್ದೇವೆ. ಹಾಗೆಯೇ ಅಯೋನಿಜೆ ಯಾದ ಸೀತಾದೇವಿಯನ್ನೂ, ಸಾಕ್ಷಾತ್ ಲಕ್ಷ್ಮೀ ಅಥವಾ ಶ್ರೀದೇವಿ ಎಂದೂ ತಿಳಿದಿದ್ದೇವೆ. ಈ ವಿಚಾರವನ್ನು ವಿಷ್ಣು ಪುರಾಣದ ಮೈತ್ರೇಯ ಪರಾಶರ ಸಂವಾದದಲ್ಲಿ, ಶ್ರೀಸ್ತುತಿಯ ಪ್ರಸಂಗದಲ್ಲಿ ಕಾಣಬಹುದು--

ರಾಘವತ್ವೇಽಭವತ್ಸೀತಾ ರುಕ್ಮಿಣೀ ಕೃಷ್ಣಜನ್ಮನಿ
ಅನ್ಯೇಷು ಅವತಾರೇಷು ವಿಷ್ಣೋರೇಷಾಽನಪಾಯಿನೀ
ದೇವತ್ವೇ ದೇವ ದೇಹೇಯಂ ಮನುಷ್ಯತ್ವೇ ಚ ಮಾನುಷೀ
ವಿಷ್ಣೋರ್ದೇಹಾನುರೂಪಂ ವೈ ಕರೋತ್ಯೇಷಾತ್ಮನಸ್ತನುಮ್

--ಎಂದರೆ, ಶ್ರೀಮನ್ನಾರಾಯಣನು ಜಗತ್ತಿನ ಉದ್ಧಾರಕ್ಕಾಗಿಯೇ ಅನಂತ ನಾಮಧೇಯಗಳಿಂದಲೂ, ಅನಂತರೂಪಗಳಿಂದಲೂ ಅವತರಿಸುತ್ತಿರುವನಷ್ಟೆ; ಅಂತೆಯೇ ಅತನ ನಿತ್ಯಸಾನ್ನಿಧ್ಯವುಳ್ಳ ಶ್ರೀದೇವಿಯೂ ಸಹ ಆತನನ್ನು ಅನುಸರಿಸುವಳು, ವಿಷ್ಣುವು ರಾಮನಾಗಿ ಅವತರಿಸಿದಾಗ ಶ್ರೀ ದೇವಿಯು ಸೀತೆಯಾದಳು; ಕೃಷ್ಣಜನ್ಮದಲ್ಲಿ ರುಕ್ಮಿಣಿಯಾದಳು; ಹೀಗೆಯೇ ಇತರ ಅವತಾರಗಳಲ್ಲಿಯೂ ತದನುಸಾರಿಣಿಯಾಗಿರುವುದೇ ಅವಳ ಪ್ರೇಮ ಪೂರ್ಣವಾದ ಧರ್ಮವಾಗಿದೆ. ಹೆಚ್ಚೇನು! ಅವನು ದೇವತಾ ಸ್ವರೂಪದಿಂದಿದ್ದರೆ, ಈಕೆಯೂ ದೇವತಾ ಶರೀರದಿಂದಿರುವಳು; ಆತನು ಮಾನುಷರೂಪದಿಂದಿದ್ದರೆ, ಈಕೆಯೂ ಮನುಷ್ಯ ರೂಪದಿಂದಿರುವಳು -- ಹೀಗೆ ಇವರಿಬ್ಬರ ನಿತ್ಯಸಾಹಚರ್ಯವು ಪ್ರಸಿದ್ಧವಾದುದು. ಆದುದರಿಂದಲೇ ಶ್ರೀರಾಮ 'ಅವನೀ ತನಯಾ ಕಮನೀಯಕರನು'. ಇಂತಹ ನಿತ್ಯಯೋಗವುಳ್ಳ ಜಗನ್ಮಾತಾಪಿತೃಗಳನ್ನೂ, ಅವರ ಸೌಲಭ್ಯ ಸೌಶೀಲ್ಯ, ವಾತ್ಸಲ್ಯ, ಸ್ವಾಮಿತ್ವವೇ ಮೊದಲಾದ ಗುಣಗಳನ್ನು ಗಮನಿಸಿಯೇ ಭಕ್ತನು 'ರಘುರಾಮಮಯೇ' ಅಂದರೆ ಶ್ರೀರಾಮನನ್ನು ರಕ್ಷಕನಾಗಿ ಆಶ್ರಮಿಸುತ್ತೇನೆ -- ಎಂದು ಪ್ರಾರ್ಥಿಸಿರುವುದು ಅಮೋಘವಾದುದು.

ಸುಮುಖಂ ಸುಹೃದಂ ಸುಲಭಂ ಸುಖದಂ
ಸ್ವನುಜಂ ಚ ಸುಕಾಯಮಮೋಘಶರಮ್,
ಅಪಹಾಯ ರಘೂದ್ವಹಮನ್ಯಮಹಂ
ನ ಕಥಂಚನ ಕಂಚನ ಜಾತು ಭಜೇ. ೮

ಈ ಪದ್ಯದಲ್ಲಿಯೂ ಶ್ರೀರಾಮನನ್ನು ಬಿಟ್ಟರೆ ಮತ್ತೆ ಯಾರೂ ನನಗೆ ರಕ್ಷಕರಿಲ್ಲವೆಂದು ಭಕ್ತನು ಘೋಷಿಸುತ್ತಾನೆ--

ಶ್ರೀರಾಮನು ಸುಂದರಮೂರ್ತಿ; ಸುಮುಖ; ಸರ್ವಲೋಕ ಸುಹೃತ್; ಭಕ್ತರಿಗೆ ಸುಲಭ; ಶಾಶ್ವತ ಸುಖವನ್ನು ನೀಡುವವನು; ಒಳ್ಳೆಯ ಸಹೋದರರುಳ್ಳವನು ಅಥವಾ ಭ್ರಾತೃ ಪ್ರೇಮದ ಸಜೀವಮೂರ್ತಿ; ವ್ಯರ್ಥವಾಗದಂತಹ ಶರಸಂಧಾನವುಳ್ಳವನು. ಇಂತಹ ಆಪದ್ಬಂಧುವೂ, ಅನಾಥ ರಕ್ಷಕನೂ ಆದ ಶ್ರೀರಾಮಚಂದ್ರನನ್ನು ಬಿಟ್ಟು ಮತ್ತೆಯಾರನ್ನೂ ಎಂದಿಗೂ ನಾನು ಆಶ್ರಯಿಸುವುದಿಲ್ಲ -- ಎನ್ನುವುದರಿಂದ ಭಕ್ತನಿಗೆ ಭಗವಂತನಲ್ಲಿರುವ ನಿಷ್ಠೆಯು ಅಚಂಚಲವಾದುದೆಂದೂ, ಭಕ್ತನಾದವನು ತೈಲಧಾರೆಯಂತಹ ಅವಿಚ್ಛಿನ್ನವಾದ ಭಕ್ತಿಯುಳ್ಳವನಾಗಿರಬೇಕೆಂಬುದೂ ಸುವ್ಯಕ್ತವಾಗುವುದು.

ವಿನಾ ವೇಂಕಟೇಶಂ ನ ನಾಥೋ ನ ನಾಥಃ
ಸದಾ ವೇಂಕಟೇಶಂ ಸ್ಮರಾಮಿ ಸ್ಮರಾಮಿ,
ಹರೇ ವೇಂಕಟೇಶ ಪ್ರಸೀದ ಪ್ರಸೀದ
ಪ್ರಿಯಂ ವೇಂಕಟೇಶ ಪ್ರಯಚ್ಛ ಪ್ರಯಚ್ಛ. ೯

ಮೇಲಿನ ಪದ್ಯದಲ್ಲಿ ಶ್ರೀರಾಮ, ಶ್ರೀಕೃಷ್ಣನೇ ಮೊದಲಾದ ಅವತಾರಗಳಿಂದ ಸೂಚಿತನಾದ ವೇಂಕಟೇಶನ ದಿವ್ಯಗುಣಗಳನ್ನು ಕೊಂಡಾಡಿ, ಈಗ ಸಾಕ್ಷಾತ್ತಾಗಿ ಶ್ರೀವೇಂಕಟೇಶನನ್ನೇ ಭಕ್ತನು ಪ್ರಾರ್ಥಿಸುತ್ತಾನೆ.

ಶ್ರೀ ವೇಂಕಟೇಶನನ್ನು ಬಿಟ್ಟರೆ ಬೇರೆ ರಕ್ಷಕರಿಲ್ಲ. "ಕಲೌ ವೇಂಕಟನಾಯಕಃ" --ಎಂಬಂತೆ ಈ ಕಲಿಕಾಲದಲ್ಲಿಯಂತೂ ಶ್ರೀ ವೇಂಕಟೇಶನೇ ಉತ್ತಾರಕನು. ಆದುದರಿಂದಲೇ ಎಲೈ ವೇಂಕಟೇಶನೇ! ಯಾವಾಗಲೂ ನಿನ್ನನ್ನು ಸ್ಮರಿಸುತ್ತೇನೆ.

ಹರೇರ್ನಾಮೈವ ನಾಮೈವ ನಾಮೈವ ಮಮ ಜೀವನಮ್
ಕಲೌ ನಾಸ್ತ್ಯೇವ ನಾಸ್ತ್ಯೇವ ನಾಸ್ತ್ಯೇವ ಗತಿರನ್ಯಥಾ

--ಈ ಕಲಿಕಾಲದಲ್ಲಿ ಹರಿನಾಮವನ್ನು ಬಿಟ್ಟರೆ ನನಗೆ ಬೇರೆ ಗತಿಯೇ ಇಲ್ಲವೆಂದು ಘೋಷಿಸಿರುವಂತೆ ಭಕ್ತನು ಶ್ರೀ ವೇಂಕಟೇಶನ ದಿವ್ಯ ನಾಮಸ್ಮರಣವೇ ಪರಮ ಕರ್ತವ್ಯವೆಂದು ತಿಳಿಸುತ್ತಾನೆ. ಹರೇ! ವೇಂಕಟೇಶ! ಪ್ರಸನ್ನ ನಾಗು, ಪ್ರಸನ್ನನಾಗು; ಓ ವೇಂಕಟೇಶ! ಪ್ರಿಯವಾದುದನ್ನು ಅನುಗ್ರಹಿಸು.

ಅಹಂ ದೂರತಸ್ತೇ ಪದಾಂಭೋಜಯುಗ್ಮ--
ಪ್ರಣಾಮೇಚ್ಛಯಾಗತ್ಯ ಸೇವಾಂ ಕರೋಮಿ,
ಸಕೃತ್ಸೇವಯಾ ನಿತ್ಯಸೇವಾಫಲಂ ತ್ವಂ
ಪ್ರಯಚ್ಛ ಪ್ರಯಚ್ಛ ಪ್ರಭೋ ವೇಂಕಟೇಶ. ೧೦

ವ್ಯಾವಹಾರಿಕ ದೃಷ್ಟಿಯಿಂದ ದಿವ್ಯಕ್ಷೇತ್ರವಾಸಿಯಾದ ನಿನ್ನ ಸಾನ್ನಿಧ್ಯದಿಂದ ನಾನು ಬಹು ದೂರದಲ್ಲಿರುತ್ತಿದ್ದೇನೆ. ಆದರೂ ನಿನ್ನ ಪಾದಪದ್ಮಯುಗ್ಮವನ್ನು ವಂದಿಸುವ ಅಪೇಕ್ಷೆಯಿಂದ ನಿನ್ನನ್ನು ಸಮೀಪಿಸಿ, ನಿನ್ನ ಸೇವೆಯನ್ನು ಮಾಡುತ್ತೇನೆ. ಎಲೈ ಪರಮ ಕರುಣಾಳುವಾದ ವೇಂಕಟೇಶನೆ? ನಾನು ನನ್ನ ಶಕ್ತಿಯಿದ್ದಂತೆ ನಿನ್ನ ಸಾನ್ನಿಧ್ಯಕ್ಕೆ ಬಂದು ಯತ್ಕಿಂಚಿತ್ ಸೇವೆಯನ್ನು ಒಂದೇ ಒಂದುಸಾರಿ ನಡೆಸಿದರೂ, ನಿತ್ಯ ಸೇವಾಫಲವನ್ನು ನನಗೆ ಅನುಗ್ರಹಿಸು.

ಅಜ್ಞಾನಿನಾ ಮಯಾ ದೋಷಾ-- ನಶೇಷಾನ್ ವಿಹಿತಾನ್ ಹರೇ,
ಕ್ಷಮಸ್ವ ತ್ವಂ ಕ್ಷಮಸ್ವ ತ್ವಂ ಶೇಷಶೈಲ ಶಿಖಾಮಣೇ. ೧೧

ಭಕ್ತನೂ ಈ ಸ್ತೋತ್ರವನ್ನು ಮುಗಿಸುತ್ತಾ ಕೊನೆಯದಾಗಿ ಭಗವಂತನಲ್ಲಿ ಕ್ಷಮೆಯನ್ನು ಯಾಚಿಸುತ್ತಾನೆ--

ಶೇಷಶೈಲ ಶಿಖಾಮಣಿಯಾದ ಶ್ರೀ ವೇಂಕಟೇಶ! ನಾನು ಅಜ್ಞಾನಿ, ಸೇವೆಮಾಡುವ ನೆಪದಲ್ಲಿ ಯಾವ ಯಾವ ಅಪರಾಧಗಳನ್ನು ಮಾಡಿರುತ್ತೇನೋ ನನಗೆ ತಿಳಿಯದು. ಪರಮ ಕಾರುಣಿಕನಾದ ನೀನು ನನ್ನ ಅಪರಾಧಗಳೆಲ್ಲವನ್ನೂ ಕ್ಷಮಿಸು.

ಇತಿ ಶ್ರೀ ವೇಂಕಟೇಶ ಸ್ತೋತ್ರವು ಮುಗಿಯಿತು.

* * * * *

# ಮೂರ್ತಿ ವೈಶಿಷ್ಟ್ಯ

---ಸಿ. ಗೋವಿಂದಾಚಾರ್

ಭಗವಂತನ ಪಂಚವ್ಯೂಹ ರೂಪಗಳಲ್ಲಿ ಪರ, ವ್ಯೂಹ ಹಾರ್ದ ಹಾಗೂ ವಿಭವ ರೂಪಗಳು ಒಂದು ಮುಗಿದ ಕಥೆಯಾಗಿದೆ. ಈ ಕಲಿಯುಗದಲ್ಲಿ ಚೇತನೋದ್ಧಾರಕ್ಕಾಗಿ ಅವನ ೫ ನೇ ರೂಪವಾದ ಅರ್ಚೆಯೇ ಪ್ರಧಾನವಾದುದು. ಜಂಗಮ ತಿರ್ಯಕ್ ಹಾಗೂ ಸ್ಥಾವರಗಳು ದೈವ ಸೃಷ್ಟಿ ಎಂಬುದು ಎಷ್ಟು ಸತ್ಯವೋ, ಲೋಹ, ಶಿಲೆ, ದಾರು ಮತ್ತು ಸುಧಾರೂಪಗಳಲ್ಲಿ ಮನುಷ್ಯನು ದೇವರನ್ನು ಸೃಷ್ಟಿಸಿರುವುದು ಅಷ್ಟೇ ಸತ್ಯ. ಭಕ್ತಕೋಟಿಯ ಅಭೀಷ್ಟದಂತೆ ಭಗವಂತನು ಅರ್ಚಾಮೂರ್ತಿಗಳಲ್ಲಿ ಅನುಪ್ರವೇಶಿಸಿ ತನ್ನ ಲೀಲಾವ್ಯಾಪಾರವನ್ನು ಮುಂದುವರೆಸಿದ್ದಾನೆ. ಆದ್ದರಿಂದ ಅರ್ಚಾಮೂರ್ತಿಯು ಪವಿತ್ರ, ಶುಭಾಶ್ರಯ ಹಾಗೂ ಶುದ್ಧ ಸತ್ವಮಯವಾದ್ದು. ಇವು ಕೇವಲ ಲೋಹ ಅಥವ ಶಿಲಾ ಮೂರ್ತಿಗಳು ಎಂದು ಭಾವಿಸಬಾರದು. ಹಾಗೆ ಭಾವಿಸುವುದೂ ಒಂದೇ ಮಾತೆಯನ್ನು ಕೇವಲ ಸ್ತ್ರೀ ಎನ್ನುವುದೂ ಕೇವಲ ಒಂದೇ ಮತ್ತು ಆಚಾರ್ಯರನ್ನು ಒಬ್ಬ ಮನುಷ್ಯ ಎನ್ನುವುದೂ ಒಂದೆ. ವಿವಿಧ ಭಂಗಿಯಲ್ಲಿ ಆಸನಗಳಲ್ಲಿ ಮುದ್ರೆಗಳಲ್ಲಿ ವೈವಿಧ್ಯಮಯವಾಗಿದ್ದು ಭಕ್ತರಿಗೆ ಒಂದಲ್ಲ ಒಂದು ರೀತಿಯಲ್ಲಿ ಅರ್ಚಾಮೂರ್ತಿಗಳು ಆಕರ್ಷಣೀಯವಾಗಿವೆ.

ಅರ್ಚಾಮೂರ್ತಿಗಳು ಸಮಸ್ತಚೇತನ ವರ್ಗಕ್ಕೂ ಉಪಾಸ್ಯವಾಗಿಯೂ ಮತ್ತು ಪ್ರಾಪ್ಯವಾಗಿಯೂ ಇದೆ ಎಂಬುದನ್ನು ಶ್ರುತಿ ಸ್ಪಷ್ಟಪಡಿಸಿದೆ. 'ಸುಂದರವಾದ ಅರ್ಚಾಮೂರ್ತಿಯನ್ನು ಶಾಸ್ತ್ರೋಕ್ತವಾಗಿ ಪ್ರತಿಷ್ಠಾಪಿಸಿ ಅದರಲ್ಲಿ ಭಗವಂತನ ಸಾನ್ನಿಧ್ಯವನ್ನು ಪ್ರಾರ್ಥಿಸಿ ನಿತ್ಯಾರಾಧನೆ ಮಾಡುವವರು ದೇಹಾವಸಾನದಲ್ಲಿ ಸರ್ವಕರ್ಮ ಬಾಧೆಯಿಂದ ವಿಮುಕ್ತರಾಗಿ ಸಂಪೂರ್ಣ ಬ್ರಹ್ಮಾನಂದವನ್ನು ಪಡೆಯುವರು ಎಂದು ಶೌನಕ ಋಷಿ ಉಪದೇಶಿಸಿರುತ್ತಾರೆ. ಭಗವಂತನು ತನ್ನ ದಯೆಯಿಂದಲೇ ಅರ್ಚಾರೂಪಿಯಾಗಿ ದಿವ್ಯಕ್ಷೇತ್ರಗಳಲ್ಲಿ ಸರ್ವರಿಗೂ ಗೋಚರನಾಗಿದ್ದಾನೆ.

ದಿವ್ಯಕ್ಷೇತ್ರಗಳಲ್ಲಿ ಅತ್ಯಂತ ಆಕರ್ಷಕವಾದ ಭಾಗ ಎಂದರೆ ಅಲ್ಲಿಯ ಮೂಲ ಹಾಗೂ ಉತ್ಸವ ಮೂರ್ತಿಗಳು. ಇವುಗಳ ಸೊಬಗಿಗೆ ಮಾರು ಹೋಗಿ ಮೈಮರೆತವರಲ್ಲಿ ಆಳ್ವಾರುಗಳು ಮೊದಲಿಗರು. ಮೂರ್ತಿ ಶಿಲ್ಪ, ಸಾನ್ನಿಧ್ಯ ಆಸನ ಮುದ್ರೆ ಮತ್ತು ಆಯುಧಾಭರಣಗಳನ್ನು ವಿಶೇಷವಾಗಿ ಸ್ತುತಿಸಿ ಕೊಂಡಾಡಿರುತ್ತಾರೆ. ಅರ್ಚೆಯಲ್ಲೇ ಇವರುಗಳು ವಿಭವರೂಪವನ್ನು ಕಂಡಿದ್ದಾರೆ. ಪ್ರತಿಯೊಂದು ಕ್ಷೇತ್ರದ ದೈವವೂ ಭಕ್ತ ನಿಗೋಸ್ಕರ ಪ್ರತ್ಯಕ್ಷರೂಪದಲ್ಲಿ ಪ್ರತಿಷ್ಠಿತವಾಗಿರುತ್ತದೆ. ಇದಕ್ಕನುಗುಣವಾಗಿ ಭಗವಂತನು ಸೌಮ್ಯವಾಗಿಯೋ ಅಥವ ಭಯಂಕರನಾಗಿಯೋ ವಿವಿಧ ರೂಪಗಳಲ್ಲಿ ದ್ವಿಭುಜದಿಂದ ಶೋಡಷ ಭುಜಗಳವರೆಗೂ ಹಾಗೂ ಆಯುಧಾಭರಣಗಳಿಂದ ಕೂಡಿ ತೋರ್ಪಡಿಸಿಕೊಂಡಿದ್ದಾನೆ. ದಿವ್ಯಕ್ಷೇತ್ರಗಳಲ್ಲಿ ಮೂಲ, ಉತ್ಸವ ಮೂರ್ತಿಗಳು ಯಾವ ರೀತಿಯಲ್ಲಿ ಒಂದಕ್ಕೊಂದು ವೈಶಿಷ್ಟ್ಯ ಪೂರ್ಣವಾಗಿವೆ ಹಾಗೂ ಅವುಗಳಲ್ಲಿ ಅಪರೂಪತೆ ಎಷ್ಟಿದೆ ಎಂಬುದನ್ನು ಈ ಕೆಳಕಂಡ ಅತ್ಯದ್ಭುತ ವಿಚಾರಗಳಿಂದ ತಿಳಿಯಬಹುದು.



ರಚನೆ -- ಆಸನಗಳು (ತಿರುಕ್ಕೋಲಂ) :-- ಶಿಲ್ಪ ಶಾಸ್ತ್ರ ಕಾರ್ಯಾಚರಣೆಗೆ ಬರುವ ಮುನ್ನ ಮೂರ್ತಿಗಳನ್ನು ಮರದಲ್ಲಿ ಮಾಡುತ್ತಿದ್ದರು. ಇದರಲ್ಲಿ ನಮಗೆ ಸಿಗುವ ಉದಾ: ತಿರುಕ್ಕೊಯಿಲೂರಿನ ತ್ರಿವಿಕ್ರಮ ಸ್ವಾಮಿ, ಕಂಚಿಯ ಅತ್ತಿವರದ ಮತ್ತು ಪೂರಿಜಗನ್ನಾಥ, ಕೇರಳದ ಅನಂತ ಪದ್ಮನಾಭಸ್ವಾಮಿ ಮೂಲವಾಗಿ ಮರದ ಮೂರ್ತಿ. ದೆಂಕಿ ಆಕಸ್ಮಿಕದಿಂದ ಪಾರಾದ ನಂತರ ೧೨೦೦೦ ಸಾಲಿಗ್ರಾಮ ಶಿಲೆಗಳನ್ನು 'ಕಾಡುಶರ್ಕರ' ಎಂಬ ವಿಧಾನದಿಂದಲೂ ಹಾಗೂ ವಜ್ರಲೇಪನದಿಂದ ಶಿಲಾಮೂರ್ತಿಯನ್ನು ಸೃಷ್ಟಿಸಿ ಮೂಲ ಮೂರ್ತಿಗೆ ಸರಿಹೊಂದುವಂತೆ ಜೋಡಿಸಲಾಗಿದೆ. ಮೂಲವರಿಗೆ ಅಭಿಷೇಕವಿರುವುದಿಲ್ಲ. ಜಗನ್ನಾಥ ಪುರಿಯ ದೇವರುಗಳ ರಚನೆ ಅತ್ಯದ್ಭುತವಾದುದು. ೧೨ ವರ್ಷಕ್ಕೊಮ್ಮೆ ನವ ಮೂರ್ತಿಗಳು ಪ್ರತಿಷ್ಠಿತವಾಗುವುದು. ಒಂದು ನಿರ್ಧಿಷ್ಟವಾದ ಮರದಿಂದ ಮೂರ್ತಿಯನ್ನು ಸೃಷ್ಟಿಸಲು ಪ್ರಧಾನ ಅರ್ಚರಿಕರಿಗೆ ಕನಸಿನಲ್ಲೋ ಅಥವ ದೇರಾವುದಾದರೂ ಒಂದು ಸುಳಿವು ಸಿಗುವುದು. ಕಂಚಿಯಲ್ಲಿ ೪೦ ವರ್ಷಗಳಿಗೊಮ್ಮೆ ಅನಂತ ಸರಸ್ಸಿನಲ್ಲಿರುವ ಅತ್ತಿವರದರನ್ನು ಮೇಲಕ್ಕೆ ತೆಗೆದು ಒಂದು ಮಂಡಲ ಪೂಜೆ ಜರುಗುವುದು. ಸಿಂಹಾಚಲದ ವರಾಹ ನೃಸಿಂಹ ಮೂರ್ತಿಯ ರೂಪ ತುಂಬಾ ಘೋರ ಹಾಗೂ ಭಯಾನಕವಾದ್ದರಿಂದ ವರ್ಷದಲ್ಲಿ ೧ ದಿನ ಬಿಟ್ಟು ಮಿಕ್ಕದಿನಗಳು ಮೂರ್ತಿಗೆ ಪೂರ್ಣವಾಗಿ ಚಂದನ ಲೇಪನವಿದ್ದು ಒಂದು ದಪ್ಪ ಕಂಭದಂತೆಯೋ ಅಥವ ಲಿಂಗಾಕಾರವಾಗಿ ಕಾಣುವುದು.

ದಾರು ಮೂರ್ತಿಗಳ ನಂತರ ಸುಧಾಮೂರ್ತಿಗಳ (ಮಣ್ಣು + ಗಾರೆ ಮಿಶ್ರಿತ) ಸೃಷ್ಟಿ ಆಯಿತು. ಶ್ರೀರಂಗವೂ ಸೇರಿ ೩೫ ದಿವ್ಯಕ್ಷೇತ್ರಗಳಲ್ಲಿ ಸುಧಾ ಮೂರ್ತಿಗಳಿವೆ. ಸವೆತದ ಸಮಸ್ಯೆಯಿಂದ ಇವುಗಳು ದೈನಂದಿನ ಸ್ನಾನಕ್ಕೆ ಅನರ್ಹ. ಕ್ರಮೇಣ ಶಿಲಾ ಮೂರ್ತಿಗಳ ಕಾಲ ಸನ್ನಿಹಿತವಾಯಿತು. ಅತ್ಯುತ್ತಮ ಶಿಲ್ಪಕಲಾಕೃತಿಗಳ ಬೀಡಾದ ಬೇಲೂರು, ಹಳೇಬೀಡು, ಸೋಮನಾಥಪುರ ನುಗ್ಗೇಹಳ್ಳಿ, ಒರಿಸ್ಸಾದ ಕೊನಾರ್ಕಗಳಲ್ಲಿರುವ ಉತ್ತಮ ಶಿಲ್ಪಕಲಾಮೂರ್ತಿಗಳಂತೆಯೇ ಇಂದಲೂರಿನ ಪರಿಮಳ ರಂಗನಾಥ ಹಾಗೂ ನವತಿರುಪತಿಯ ತಿರುಪ್ಪುಳಿಂಗುಡಿಯ ಭೂಮಿ ಪಾಲನ್ ಮೂರ್ತಿಗಳಲ್ಲಿರುವ ಶ್ರೇಷ್ಠ ಶಿಲ್ಪಕಲೆಯನ್ನು ಸಾವಧಾನದಿಂದ ನೋಡಿ ತೃಪ್ತಿಪಡದೇಕು. ತಿರುಪುಲ್ಲಾಣಿಯ ದರ್ಭ ಶಯನ ಹಾಗೂ ತಿರುಮಯ್ಯಂ ನ ಭುಜಂಗ ಶಯನ ಮೂರ್ತಿಗಳನ್ನು ಬಹಳ ಹತ್ತಿರ ಸೇವೆಮಾಡಿದರೆ

ಅವುಗಳಲ್ಲಿರುವ ಉತ್ತಮ ಶಿಲ್ಪಕಲೆಯನ್ನು ಸವಿಯುವುದಲ್ಲದೆ ಮುಕ್ಕೋಟಿ ದೇವತೆಗಳ ಕಲ್ಪನೆ ನಮ್ಮಲ್ಲಿ ಮೂಡುವುದು. ಸೇತು ಬಂಧನಕ್ಕಾಗಿ ಆಂಜನೇಯ, ನೀಲ, ಜಾಂಬವಂತ, ನಲ, ಸೂರ್ಯ ಚಂದ್ರಾದಿಗಳು ಚಿಂತಾಕ್ರಾಂತರಾಗಿ ಯೋಚಿಸುತ್ತಿರುವ ರೀತಿ ಬಹಳ ಚೆನ್ನಾಗಿದೆ: ತಿರುಮೈಯ್ಯರ್ ಸನ್ನಿಧಿಯಲ್ಲಿ ಮಧುಕೈಟಭರ ಉಪಟಳವನ್ನು ತಾಳಲಾರದೆ ದೇವತೆಗಳು ಓಡಿಹೋಗುತ್ತಿರುವುದನ್ನು, ಮಹಾಲಕ್ಷ್ಮಿಹೆದರಿ ತಿರುಮೈಯ್ಯರ್‌ನ ಪಾದದ ಬಳಿ ಅವಿತು ಕುಳಿತಿರುವುದು, ಅಸುರರನ್ನು ಓಡಿಸಲು ಆದಿಶೇಷನು ವಿಷಜ್ವಾಲೆಯನ್ನು ಉಗುಳುತ್ತಿರುವುದು, ದೇವರ ಅನುಮತಿ ಇಲ್ಲದೆ ಮಾಡಿದಕ್ಕಾಗಿ ಆದಿಶೇಷನು ಕೃದ್ಧನಾಗಿರುವುದು 'ಭಯಪಡದೇಡ' ಎಂದು ತಿರುಮಯ್ಯರ್ ಅವನನ್ನು ಅನುಗ್ರಹಿಸುತ್ತಿರುವುದು, ಮತ್ತು ಇವುಗಳನ್ನು ವೀಕ್ಷಿಸುತ್ತಿರುವ ಮುಕ್ಕೋಟಿದೇವತೆಗಳು -- ಎಲ್ಲಾ ಒಂದು ದೊಡ್ಡ ಬಂಡೆಗಲ್ಲಿನಲ್ಲಿದೆ.

ಅಹೋಬಿಲದ ಅಷ್ಟ ಭುಜ ಜ್ವಾಲಾ ನೃಸಿಂಹ ಚೆಂಗಲ್‌ಪಟ್ ಸಮೀಪವಿರುವ ಸಿಂಗ ಪೆರುಮಾಳ್, ಕರ್ಣಾಟಕದ ಸಾವನದುರ್ಗ, ಮಂಗಳಗಿರಿಯ ಪಾನಕ ನೃಸಿಂಹ ಮೂರ್ತಿಗಳು ಬಂಡೆಗಳಮೇಲೆ ಕೆತ್ತಲಾಗಿದೆ. ೫ರ ಸಂಖ್ಯೆಗೂ ಪಾಂಚರಾತ್ರಾಗಮನಕ್ಕೂ ಹತ್ತಿರವಾದ ನಂಬಿದೆ. ಆಗಮಶಾಸ್ತ್ರ ಪಂಚದೇರ ವಿಧಿಯನ್ನು ಸೂಚಿಸುತ್ತದೆ. ಎನ್ನಪ್ಪನ್, ಮುತ್ತಪ್ಪನ್, ಪೊನ್ನಪ್ಪನ್, ಮಣಿಯಪ್ಪನ್ ಮತ್ತು ಒಪ್ಪಿಲಾದ ಅಪ್ಪನ್ -- ಇವು ಉಪ್ಪಿಳಿ ಅಪ್ಪನ್ ದೇವಸ್ಥಾನದ (ತಿರುವಿಣ್ಣಗರಂ) ವಿಶೇಷ. ಆದನೂರಿನ ಆಂಡಾಳಕ್ಕುಮೈಯ್ಯನ್, ಶ್ರೀರಂಗ, ಇಂದಳೂರಿನ ಪರಿಮಳ ರಂಗನಾಥ, ಶ್ರೀರಂಗಪಟ್ಟಣ ಹಾಗೂ ಪುಷ್ಕರ ಇವು ಪಂಚರಂಗನಾಥಕ್ಷೇತ್ರಗಳು. ತಿರುಕಣ್ಣಪುರಂನ ಶೌರಿರಾಜರ್, ತಿರುಕಣ್ಣಂಗುಡಿಯ ದಾಮೋದರ, ತೇರೆಳಂದೂರಿನ ಆಲಮರ ಕೃಷ್ಣ, ನಾಂಗೂರಿನ ಕಾವಳಂಬಾಡಿಯ ರಾಜಗೋಪಾಲ ಹಾಗೂ ಇಡೀ ದಿವ್ಯಕ್ಷೇತ್ರಗಳ ಪೈಕಿ ಅತ್ಯಂತ ಸುಂದರಮೂರ್ತಿ ಮನ್ನಾರ್ ಗುಡಿಯ ಶ್ರೀ ವಿದ್ಯಾರಾಜಗೋಪಾಲ -- ಇವು ಪಂಚ ಕೃಷ್ಣಕ್ಷೇತ್ರಗಳು. ಕರ್ಣಾಟಕದಲ್ಲಿ ಪಂಚನಂಬನಾರಾಯಣ ಕ್ಷೇತ್ರಗಳಿವೆ. ಹೀಗೆಯೇ ಪಂಚದ್ವಾರಕ, ಆರು ವಿಣ್ಣಹರಂಗಳು, ಸಪ್ತಬದರಿ, ಆಳ್ವಾರ್ ತಿರುನಹರಿಯ ಅಷ್ಟ ತಿರುಪತಿ, ಅಹೋಬಿಲದ ನವನಾರಸಿಂಹ ಮೂರ್ತಿಗಳು ಸಾಂಖ್ಯಿಕವಾಗಿಯೂ ಪ್ರಸಿದ್ಧಿಹೊಂದಿವೆ. ಎರಡು ಕ್ಷೇತ್ರಗಳ ಮೂರ್ತಿಯ ಹೆಸರು ಗಮನಾರ್ಹವಾಗಿದೆ. a) ಕಂಚಿ ಏಕಾಂಬರೇಶ್ವರ ದೇವಾಲಯದಲ್ಲಿರುವ ನಿಲಾತಿಂಗಳ್ ಕುಂಡತ್ತಾನ್. b) ಅಷ್ಟ ತಿರುಪತಿಗಳಲ್ಲೊಂದಾದ ತೆನ್ ತಿರುಪೇರೈನ ಮಕರಾಯಿತಕರ್ಣಪಾಶರ್ ಹಾಗೂ ಮಕರ ಭೂಷಣವಲ್ಲಿ ತಾಯಾರ್.

ಚತುರ್ವ್ಯೂಹ ಮೂರ್ತಿಗಳ ಕಲ್ಪನೆ ನಮ್ಮ ಮನಸ್ಸಿನಲ್ಲಿ ದೇರೂರುವಂತೆ ಮಾಡುವ ಮೂರ್ತಿಗಳು ತಿರುನರೈಯೂರಿನ (ಕುಂಭಕೋಣ) ನಿನ್ನನಂಬಿ (ದ್ವಿಭುಜವಾಸುದೇವ) ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಹಾಗೂ ನಂಬಿಕ್ಕೈನಾಚ್ಚಿಯಾರ್ (ಮಂಜುವಲ್ಲಿ) -- ಎಲ್ಲಾ ನಿಂತು ಮಾತನಾಡುತ್ತಿರುವ ರೀತಿಯಲ್ಲಿದೆ. ನಿಂತಿರುವ ಪಂಚತಾಯಾರ್ ಕ್ಷೇತ್ರಗಳು ಎರಡು a) ತಿರುತ್ತಂಗಾಳ್ (ಶಿವಕಾಶಿಸಮೀಪ) -- ನಿನ್ನ ನಾರಾಯಣರ್, ಅನ್ನನಾಯಕಿ, ಅನಂತನಾಯಕಿ, ಅಮೃತನಾಯಕಿ, ಜಾಂಬವತಿ ಮತ್ತು ಪ್ರತ್ಯೇಕ ಸನ್ನಿಧಿಯಲ್ಲಿ ಶಂಗಮಲರ್‌ವಲ್ಲಿ. b) ತಿರುಚ್ಚೇರೈ (ಕುಂಭಕೋಣ) -- ಸಾರನಾಥಸ್ವಾಮಿ ಶ್ರೀ ಭೂನೀಳಾ ಮಹಾಲಕ್ಷ್ಮಿ ಮತ್ತು ಸಾರನಾಯಕಿ ಹಾಗೂ ನಾಂಗೂರಿನ ತಿರುವಾಲಿಯಲ್ಲಿ ಲಕ್ಷ್ಮಿಯು ನೃಸಿಂಹಸ್ವಾಮಿಯ ಬಲತೊಡೆಯ ಮೇಲೆ ಆಸೀನಳಾಗಿದ್ದಾಳೆ. ಉಪ್ಪಿಳಿಯಪ್ಪನ್ ಸ್ವಾಮಿಯ ಬಲಭಾಗದಲ್ಲಿ ಭೂಮಾದೇವಿಯು ಅಂಜಲಿ ಬದ್ಧಳಾಗಿ ಮಂಡಿಯೂರಿ ಕುಳಿತಿದ್ದಾಳೆ. ಕಂಚಿಯ ಯಥೋಕ್ತ

ಗಾರಿಯ ಪಾದದ ಬಳಿ ಸರಸ್ವತಿ (ವೇಗವತಿ) ಕುಳಿತಿದ್ದಾಳೆ.

ಶಯನ ಮೂರ್ತಿಗಳಲ್ಲಿ ತೋಳನ್ನೇ ದಿಂಬಾಗಿಟ್ಟುಕೊಂಡಿರುವ ಭುಜಂಗಶಯನ ಮೂರ್ತಿಗಳೇ ಹೆಚ್ಚಾಗಿರುವುದು. ಕೇರಳದ ಅನಂತ ಪದ್ಮನಾಭಸ್ವಾಮಿ ಹಾಗೂ ಆದಿಕೇಶವಸ್ವಾಮಿ (ತಿರುವಾಟ್ಟಾರ್) ಆಕಾರ -- ಉದ್ದಗಲಗಳಲ್ಲಿ ಒಂದೇ. ಈ ಎರಡೂ ಮೂರ್ತಿಗಳನ್ನು ಮೂರು ಬಾಗಿಲಿನಿಂದ ನೋಡಬೇಕು. ಅತ್ಯಂತ ಎತ್ತರದ ಮೂರ್ತಿ ಎಂದರೆ ಕುಳಿತಿರುವ 'ಪಾಂಡವ ಧೂತರ್' (ಕಂಚಿ) ನಿಂತಿರುವ ಮೂರ್ತಿಗಳಲ್ಲಿ ಉಲಹಳಂದ ಪೆರುಮಾಳ್, ತಿರುಕ್ಕುರಂಗುಡಿಯ ತಿರುಪಾರ್ ಕಡಲ್ ನಂಬಿ, ಉಪ್ಪಿಳಿಯಪ್ಪನ್, ತಿರುಕ್ಕಣ್ಣಿಯಂಗೈ ಭಕ್ತ ವತ್ಸಲರ್, ಪಾರ್ಥಸಾರಥಿ ಇತ್ಯಾದಿ. ದೊಡ್ಡದಾದ ಅಂಬೆಗಾಲಿನ ಕೃಷ್ಣಮೂರ್ತಿ (ಮೂಲವರು) ಮೈಸೂರಿನ ಅರಮನೆಯ ಪ್ರಸನ್ನ ಕೃಷ್ಣಸ್ವಾಮಿ ದೇವಸ್ಥಾನದಲ್ಲಿದೆ. ಶ್ರೀಕೃಷ್ಣಬಲರಾಮರು ಒಟ್ಟಿಗೆ ಇರುವ ಕ್ಷೇತ್ರಗಳು ತಿರುಚಾನೂರು ಮತ್ತು ಜಗನ್ನಾಥಪುರಿ.

ಮೂರು ಅಂತಸ್ತುಗಳಲ್ಲಿರುವ ಮೂರ್ತಿಗಳನ್ನು ತಿರುಕ್ಕೋಟ್ಟಿಯೂರ್ ಮತ್ತು ಕಂಚಿಯ ಪರಮೇಶ್ವರ ವಿಣ್ಣಗರಂನಲ್ಲಿ ನೋಡಬಹುದು. ಉತ್ತಮರ್ ಕೋಯಿಲ್ ಹಾಗೂ ತಿರುಕೋಟ್ಟಿಯಾರ್ ತ್ರಿಮೂರ್ತಿಗಳ ಸಂಗಮಕ್ಷೇತ್ರಗಳು. ತಿರುವಹೀಂದ್ರಪುರದ ದೇವನಾಯಕಸ್ವಾಮಿ (ಉತ್ಸವರು)ಗೆ ಹಣೆಗಣ್ಣು ಬಲಗೈಯಲ್ಲಿ ಕಮಲ ಮತ್ತು ಶಂಖ ಚಕ್ರಗಳಿವೆ. ನಿಂತಿರುವ ನೃಸಿಂಹಮೂರ್ತಿ ಇರುವುದು ತಿರುನೀರ್ಮಲೈನಲ್ಲಿ. ಭಾರಿ ಆಕಾರದ ೨ ನೃಸಿಂಹಮೂರ್ತಿಗಳು a) ನಾಮಕ್ಕಲ್. b) ತಂಜೈ ವೀರನೃಸಿಂಹ. ಅತ್ಯಂತ ಕಿರಿದಾದ ಮೂಲ ಮೂರ್ತಿ ಅಹೋಬಿಲದ ಉಗ್ರ ನರಸಿಂಹ. ಕರ್ಣಾಟಕದ ಘಾಟಿ ಹಾಗೂ ಕುಕ್ಕೆಸುಬ್ರಹ್ಮಣ್ಯ ಕ್ಷೇತ್ರಗಳಲ್ಲಿ ಸುಬ್ರಹ್ಮಣ್ಯನ ಹಿಂಭಾಗದಲ್ಲಿ ನೃಸಿಂಹಮೂರ್ತಿಗಳಿವೆ. (ಕನ್ನಡಿ ಸೇವೆಯಲ್ಲಿ ಗೋಚರವಾಗುವುದು) ಇದೇರೀತಿ ಸುದರ್ಶನ -- ನೃಸಿಂಹಮೂರ್ತಿಗಳ ಸಂಘವಿದೆ.

ಕುಂಭಕೋಣದ ಆರಾವಮುದನ್ ಉದ್ಯೋಗಶಯನಮೂರ್ತಿ. ಅಂದರೆ ಶಯನಿಸಿರುವ ಹಾಗೂ ಏಳುತ್ತಿರುವ ದ್ವಿಭಂಗಿಯಲ್ಲಿದೆ. ಶ್ರೀನಿವಾಸನ ಬಳಿ ಇರುವ ಶ್ರೀರಾಮ ಮತ್ತು ತಿರುವಹೀಂದ್ರ ಪುರದಲ್ಲಿರುವ ಶ್ರೀರಾಮ ತ್ರಿಭಂಗಿಯಲ್ಲಿದೆ. ಅಂದರೆ ವಾಲಿದ ಸೊಂಟ ಹಾಗೂ ಕತ್ತು. ಕುಂಭಕೋಣದ ರಾಮ ದೇವಸ್ಥಾನದಲ್ಲಿ ರಾಮ ಪಂಚಾಯತನವನ್ನು ನೋಡಬಹುದು. ಇಲ್ಲಿ ಆಂಜನೇಯನು ವೀಣೆ ನುಡಿಸುತ್ತಿರುವನು. ಇಡೀ ಭಾರತದಲ್ಲಿ ಕೂರ್ಮಮೂರ್ತಿ ಇರುವ ಏಕೈಕಕ್ಷೇತ್ರ ಆಂಧ್ರದ ಶ್ರೀಕೂರ್ಮ. ವರಾಹಕ್ಷೇತ್ರಗಳು ಬಹಳ ವಿರಳ. ಎಡಕ್ಕೆ ಭೂದೇವಿ. ಎಡಗಾಲು ಆದಿಶೇಷನಮೇಲೆ ಇಟ್ಟಿರುವ ವರಾಹ ಮೂರ್ತಿಗಳ ಒಂದೆರಡು ಕ್ಷೇತ್ರಗಳವೆ. ಶ್ರೀ ಮುಷ್ಣಂನ ಶ್ವೇತ ವರಾಹ ಮೂರ್ತಿ ಸಮರದಲ್ಲಿ ಸಿಕ್ಕಿ ಮೈಸೂರು ಅರಮನೆಗೆ ವರ್ಗಾಯಿಸಲ್ಪಟ್ಟಿತು. ಮೂಲ ಮೂರ್ತಿ ಇಲ್ಲದೆ. ಬಹಳ ಕಾಲದವರೆಗೆ ಸಾಲಗ್ರಾಮಕ್ಕೆ ಮಾತ್ರ ಆರಾಧನೆ ಇತ್ತು ಹೀಗೆಯೇ ಮೂಲ ಮೂರ್ತಿ ಇರದ ಕ್ಷೇತ್ರಗಳು a) ನೈಮಿಷಾರಣ್ಯ. b) ಸಿಬಿ. ಮದ್ದೂರಿನ ವರದರಾಜ, ಮೇಲುಕೋಟೆಯ ಯೋಗಾನೃಸಿಂಹ ಪೂರ್ತ ಸಾಲಗ್ರಾಮ ಶಿಲಾ ಮೂರ್ತಿಗಳು. ದೇವರಾಯನ ದುರ್ಗದ ಕುಂಭಿ ನೃಸಿಂಹಸ್ವಾಮಿಯು ಬಾಯಿ ತೆರೆದಿರುವುದನ್ನು ಸಾಲಿಗ್ರಾಮವೆಂದು ಭಾವಿಸಿ ನಿತ್ಯರ್ಚನಾ ವಿಧಿ ಇರುವುದು. ಯೋಗ ಹಯಗ್ರೀವ ಮೂರ್ತಿ ಇರುವ ಏಕೈಕ ಕ್ಷೇತ್ರ ತಿರುವಹೀಂದ್ರಪುರ. ಇದು ವೇದಾಂತ ದೇಶಿಕರಿಗೆ ಗರುಡದತ್ತವಾಗಿ ಬಂದಿರುತ್ತೆ. ಅಲೀಢ (ಬಲಗಾಲನ್ನು ಮುಂದಿಟ್ಟ) ಭಂಗಿಯಲ್ಲಿರುವ ಏಕೈಕ ಮೂರ್ತಿ ಸುದರ್ಶನ ಮೂರ್ತಿ.

ಭುಜ ಹಾಗೂ ಕೈಗಳ ವಿನ್ಯಾಸಗಳಲ್ಲಿ ದ್ವಿಭುಜ ಮೂರ್ತಿಯಿಂದ ಶೋಡಷಭುಜ ಮೂರ್ತಿಗಳವರೆಗೂ ಇವೆ. ಕಂಚಿಯಲ್ಲಿರುವ ಅಷ್ಟ ಭುಜರ್ (ಮೂಲವರು) ಅಪರೂಪದ್ದು ಅಹೋಬಿಲ ಕ್ಷೇತ್ರದಲ್ಲಿ ಚತುರ್ಭುಜದಿಂದ ದಶಭುಜ ನೃಸಿಂಹ ಮೂರ್ತಿಗಳವರೆಗೂ ಇದೆ. ಸಾಮಾನ್ಯವಾಗಿ ಶ್ರೀರಾಮ ಬಿಲ್ಲು ಬಾಣ ಹಿಡಿದಿರುವ ದ್ವಿಭುಜ ಮೂರ್ತಿ, ಆದರೆ ಭದ್ರಾಚಲದ ಮೂಲವರು ಪುಳ್ಳಚೂದಂಗುಡಿ (ಸ್ವಾಮಿ ಮಲೈ ಸಮೀಪ) ಯಲ್ಲಿ ಉತ್ಸವರು ಚತುರ್ಭುಜಮೂರ್ತಿ (ಕೋಲವಿಲ್ಲಿರಾಮನ್) ಶೋಲಿಂಗರ್ ನಲ್ಲಿ ಮಾತ್ರ ಯೋಗಾಂಜನೇಯನು ಶಂಖ ಚಕ್ರಸಮೇತ ಚತುರ್ಭುಜ ಮೂರ್ತಿ. ಕೆಲವು ಮಾಧ್ವಮಠಗಳಲ್ಲಿ ಪಂಚ ಮುಖಿ ಆಂಜನೇಯ ಮೂರ್ತಿ ಇದೆ.

ಆಯುಧ ವಿನ್ಯಾಸಗಳಲ್ಲಿ ವೈಶಿಷ್ಟ್ಯ:-- ತಿರುಮೂಹೂರಿನಲ್ಲಿರುವ (ಮಧುರೈಸಮೀಪ) ಸುದರ್ಶನ ಮೂರ್ತಿಗೆ (ಮೂಲವರ್ ಹಾಗೂ ಉತ್ಸವರಿಗೆ) ಮಾತ್ರ ಶೋಢಷಾಯುಧ ಹಾಗೂ ಸೂರ್ಯಪ್ರಭಾವಳಿಯಲ್ಲಿ ೭ ಸುತ್ತು ಬೀಜಾಕ್ಷರಗಳಿವೆ. ಕಂಚಿಯಲ್ಲಿರುವ ಉತ್ಸವ ಸುದರ್ಶನ ಮೂರ್ತಿಗೆ ಮಾತ್ರ ೧೬ ಭುಜಗಳಿವೆ. ಜಗನ್ನಾಥಪುರಿಯಲ್ಲಿ ಸುದರ್ಶನ ಮೂರ್ತಿ ಒಂದು ಸಣ್ಣಕಂಭದಂತಿದೆ. ನಂದಿ ವಿಣ್ಣಗರಂ (ಕುಂಭಕೋಣ) ನ ನಾಥನ್ ಅಳಹರ್ ಮಲೈನ ಪರಮಸ್ವಾಮಿ ಪಂಚಾಯುಧಧಾರಿಗಳು. ಉರೈಯೂರ್ ರಂಗನಾಥ, ತಿರುಮಯ್ಯಂನ ಸತ್ಯಮೂರ್ತಿ ಹಾಗೂ ಪರಮಸ್ವಾಮಿ ಪ್ರಯೋಗ ಚಕ್ರಧಾರಿಗಳಾಗಿರುತ್ತಾರೆ. ಅಂದರೆ ಚಕ್ರದಗಾಲಿ ನಮ್ಮಕಡೆ ಮುಖಮಾಡಿಕೊಂಡಿರುತ್ತೆ. ಇವುಗಳು ಕ್ಷೇತ್ರದ ಪ್ರಾಚೀನತೆಯನ್ನು ಪ್ರತಿಬಿಂಬಿಸುವುವು. ನೃಸಿಂಹಸ್ವಾಮಿ ಬಿಲ್ಲು ಬಾಣ ಹಿಡಿದಿರುವುದು ಅಹೋಬಿಲದ 'ಕಾರಂಜಿ' ಕ್ಷೇತ್ರ ದಲ್ಲಿ ಮಾತ್ರ. ಕುಂಭಕೋಣದ ಉತ್ಸವರಿಗೆ ಶಾರ್ಙ್ಗಪಾಣಿ ಎಂದೇ ಹೆಸರು. ಮದರಾಸಿನ ಪಾರ್ಥಸಾರಥಿ ಹಾಗೂ ತಿರುವಿಡವಂದೈನ ನಿತ್ಯ ಕಲ್ಯಾಣ ಪೆರುಮಾಳ್ ಮುಖಗಳಲ್ಲಿ ಕಪ್ಪನೆಯ ಕಲೆ ಶಾಶ್ವತವಾಗಿ ಉಳಿದಿರುತ್ತೆ. ಇದನ್ನು ಹೋಗಲಾಡಿಸಲು ಸರ್ವಪ್ರಯತ್ನಗಳು ವಿಫಲವಾದುವು. ಸ್ವಾಮಿಮಲೈನ ಸಮೀಪವಿರುವ ಆದನೂರ್ ಕ್ಷೇತ್ರದಲ್ಲಿ ಆದಿಶೇಷನ ಹೆಡೆಯ ಮಧ್ಯದಲ್ಲಿ ಶಂಖ ಚಕ್ರಗಳಿವೆ. ಆದಿಶೇಷನಿಗೆ ಆಂಡಾಳುಕ್ಕುಮೈಯನ್ ಚಕ್ರಾಂಕನ ಮಾಡಿ ಆಚಾರ್ಯನಾಗಿದ್ದಾನೆ ಎಂದು ಪ್ರತೀತಿ.

ಮುದ್ರಾವಿನ್ಯಾಸಗಳಲ್ಲಿ ವೈಶಿಷ್ಟ್ಯ :-- ತಿರುಕ್ಕೋಯಿಲೂರಿನ ತ್ರಿವಿಕ್ರಮಸ್ವಾಮಿ ಎಡಗೈಯಲ್ಲಿ ಚಕ್ರ ಬಲಗೈಯಲ್ಲಿ ಶಂಖ ಹಿಡಿದು 'ಇನ್ನೊಂದು ಹೆಜ್ಜೆಗೆಲ್ಲಿ ಜಾಗ' ಎಂದು ಕೇಳುತ್ತಿರುವ ಸೂಚಕ ಮುದ್ರೆ ಇದೆ. ತ್ರಿವಿಕ್ರಮತ್ವ ಸ್ಥಾಪಿಸಿ ಯಶಸ್ಸುಗಳಿಸಿದ ಸಂತೋಷದ ಭರದಲ್ಲಿ ದೇವರು ಶಂಖ ಚಕ್ರಗಳು ಬದಲಾಗಿರುವುದನ್ನು ಗಮನಿಸಲಿಲ್ಲ ಎಂದು ಸ್ಥಳ ಪುರಾಣ ತಿಳಿಸುವುದು. ಪಾರ್ಥಸಾರಥಿ ದೇವಸ್ಥಾನದ ವೆಂಕಟಕೃಷ್ಣನಿಗೆ ಬಲಗೈಯಲ್ಲಿ ಶಂಖ ಹಾಗೂ ಎಡಗೈ ವರದ ಹಸ್ತದಲ್ಲಿದೆ. ಮಧುರೈನ ಕೂಡಲ್ ಅಳುಹರ್‌ನ ಬಲ ವರದ ಹಸ್ತ ಮತ್ತು ಎಡ ಹಸ್ತದ ಮಧ್ಯದ ಎರಡು ಬೆರಳುಗಳು ಮಡಚಿಕೊಂಡಿರುವುದನ್ನು 'ಭಕ್ತರನ್ನು ಬರಮಾಡಿಕೊಂಡು ಕೇಳಿದ್ದನ್ನು ಕೊಡುವ ದೈವ' ಎಂದು ಗುಣ ವಿಶೇಷವನ್ನು ಕೊಂಡಾಡುವರು. ತಿರುಮೂಹೂರ್‌ನ ಮೋಹನ ಪೆರುಮಾಳ್ (ಉತ್ಸವರು) ದೊಗಸೆ ಅಮೃತವನ್ನು ಹಂಚುವ ದಾನಮುದ್ರೆ ಬಹಳ ಅಪರೂಪವಾದದ್ದು. ಶ್ರೀರಂಗದ ಮೇಟಿ ನೃಸಿಂಹಸ್ವಾಮಿ ಬಲಗೈಯನ್ನು ಎತ್ತಿ ಹಿಡಿದಿರುವ ದಿಗ್‌ಮೂರ್ತಿಯನ್ನು ದೂರದಿಂದಲೇ ನೋಡಬಹುದು. ಇಲ್ಲಿಯ ಮೂಲ ಮೂರ್ತಿ ಸಮರದಲ್ಲಿ ನಾಶವಾಯಿತು. ಶ್ರೀನಿವಾಸನ ಮುಂದಿರುವ ಯೋಗಾನೃಸಿಂಹ ಹಾಗೂ ಕಂಚಿಯ ಉಲಹಳಂದ ಪೆರುಮಾಳ್ (ಊರಹಂ) ಸನ್ನಿಧಿಯಲ್ಲಿರುವ ಪೇರಹಂ, ಕಾರಹಂ ಮತ್ತು ಕಾರವಾನಂ ಬೇರೆಲ್ಲಿಂದಲೋ ಬಂದಿರುವ

ಮೂರ್ತಿಗಳಾಗಿರುತ್ತವೆ. ನಾಮಕ್ಕಲ್ ನೃಸಿಂಹಸ್ವಾಮಿಯ ಬಲಗೈ ಕೆಂಪಾಗಿರುವುದನ್ನು 'ಹಿರಣ್ಯನನ್ನು ಸಂಹರಿಸಿ ಉಂಟಾದ ರಕ್ತಕಲೆ' ಎಂದು ಹೇಳುವರು. ಇಲ್ಲಿಯ ಆಂಜನೇಯಸ್ವಾಮಿ ಬೆಳೆಯುತ್ತಲೇ ಇರುವುದರಿಂದ ಗುಡಿಕಟ್ಟಿಲ್ಲ. ಬಲಗೈಯನ್ನು ಉದ್ದಕ್ಕೆ ಚಾಚಿ ಅನುಗ್ರಹಿಸುತ್ತಿರುವ ಶಯನ ಮೂರ್ತಿಗಳು. a) ಕೇರಳದ ಅನಂತ ಪದ್ಮನಾಭಸ್ವಾಮಿ -- ಶಿವನನ್ನು ಅನುಗ್ರಹಿಸುತ್ತಿರುವುದು. ಇದೊಂದೇ ಸನ್ನಿಧಿಯಲ್ಲಿ ತ್ರಿಮೂರ್ತಿಗಳು ಒಟ್ಟಿಗೆ ಇರುವುದು. b) ತಿರುಕ್ಕೋಳೂರಿನ (ಆಳ್ವಾರ್ ತಿರುನಹರಿ) ವೈತ್ತಮಾನಿಧಿ ಪೆರುಮಾಳ್ ೮ ಬಿಂದಿಗೆಗಳಿಂದ (ಅಷ್ಟೈಶ್ವರ್ಯ) ಅನುಗ್ರಹಿಸುತ್ತಿರುವುದು. c) ಕೊಡದಿಂದ ಕಜ್ಜಾಯವನ್ನು ಕೊಡುತ್ತಿರುವನು ತಿರುಪ್ಪೇರ್ ನಗರದ (ಕೋಯಿಲಡಿ) ಅಪ್ಪಕುಡುತ್ತಾನ್. d) ತಿರುವಳ್ಳೂರಿನ ವೀರ ರಾಘವಸ್ವಾಮಿಯ ಬಲಹಸ್ತ ಶಾಲಿಹೋತ್ರ ಮುನಿಯ ಮೇಲೆಯೂ ಮತ್ತು ಎಡಗೈ ಜ್ಞಾನ ಮುದ್ರೆಯಲ್ಲೂ ಇದೆ. ಮೈಸೂರಿನ ಪರಕಾಲಮಠದ ಆರಾಧ್ಯಮೂರ್ತಿ ಲಕ್ಷ್ಮಿಹಯಗ್ರೀವ ಆಲಿಂಗನ ಭಂಗಿಯಲ್ಲಿದೆ. ಬಲಗೈ ವ್ಯಾಖ್ಯಾಮುದ್ರೆ ಎಡಗೈಯಲ್ಲಿ ಪುಸ್ತಕ. ಈ ಮೂರ್ತಿಯು ಆರಾಧಕರನ್ನು (ಪರಕಾಲಸ್ವಾಮಿ) ನೋಡುತ್ತಿರುವಂತೆ ಭಾಸವಾಗುವುದು. ಅಂದರೆ ಯಾವಾಗಲೂ ಸ್ವಲ್ಪ ಬಲಕ್ಕೆ ತಿರುಗಿರುತ್ತೆ. ಅಹೋಬಿಲ ಮಠದ ಆರಾಧ್ಯಮೂರ್ತಿ ಮಾಲೋಲ ನೃಸಿಂಹ (ಕಣ್ಣನ್) ಮಾಲೋಲ ನೃಸಿಂಹಕ್ಷೇತ್ರದ ಉತ್ಸವಮೂರ್ತಿ -- ಇದು ಆಲಿಂಗನ ಭಂಗಿಯಲ್ಲಿದೆ. ಇದು ಸದಾ ಸಂಚಾರಮೂರ್ತಿಯಾದ್ದರಿಂದ ಪಾದುಕೆ ಇರುವುದು. ರಜತ ಮಂಟಪದಲ್ಲಿ ೧೦೮ ದಿವ್ಯ ಕ್ಷೇತ್ರಗಳನ್ನು ಪ್ರತಿನಿಧಿಸುವ ವಿಗ್ರಹಗಳು. ಆಳ್ವಾರಾಚಾರ್ಯ ಹಾಗೂ ಪರಂಪರೆಯಲ್ಲಿ ಬರುವ ಯತಿಗಳ ವಿಗ್ರಹಗಳು ಸುಮಾರು ೩೫೦ ವರ್ಷಗಳಿಂದಲೂ ಯಾವ ಸ್ಥಳ ಬದಲಾವಣೆ ಇಲ್ಲದೇ ಆರಾಧಿಸಲ್ಪಡುತ್ತಾ ಬಂದಿದೆ. ಇವುಗಳ ಜೊತೆಯಲ್ಲಿರುವ ನವನೀತ ಕೃಷ್ಣಮೂರ್ತಿ ಪೂರಾಬೀಜಾಕ್ಷರಗಳಿಂದ ಕೂಡಿದೆ. ಬಹಳ ಸಮೀಪದಲ್ಲಿ ಇವನ್ನು ನೋಡಬೇಕು. ಈ ಮಠಕ್ಕೆ ಸೇರಿದ ದಶಾವತಾರ ಮೂರ್ತಿಗಳು ಬಹಳ ವಿರಳ.

ಸಾಮಾನ್ಯವಾಗಿ ಅಂಜಲೀಬದ್ಧರಾಗಿ ಪದ್ಮಾಸನದಲ್ಲಿರುವ ರಾಮಾನುಜ ಮೂರ್ತಿಗಳೇ ಹೆಚ್ಚಾಗಿರುವುದು. ಆದರೆ ತಿರುಮಲೆಯಲ್ಲಿ ಶ್ರೀನಿವಾಸನಿಗೆ ಆಚಾರ್ಯನಾಗಿಯೂ, ಕಂಚಿಯಲ್ಲಿ ವರದನ ಶಿಷ್ಯನಾಗಿಯೂ, ಶ್ರೀರಂಗದಲ್ಲಿ ಮಗನಾಗಿಯೂ ಹಾಗೂ ಮೇಲುಕೋಟೆಯಲ್ಲಿ ಚೆಲುವರಾಯನಿಗೆ ತಂದೆಯಾಗಿ (ಶೆಲ್ವಪಿಳ್ಳೈ) ಭಾವಿಸಿ ಪೂಜಿಸಲಾಗಿದೆ.

ಭಾರತದಲ್ಲಿ ಕಂಡುಬರುವ ಮೂರ್ತಿಗಳ ವೈವಿಧ್ಯವು ವಿಶ್ವದ ಯಾವ ಭಾಗದಲ್ಲಿಯೂ ಇಲ್ಲ. ಇದರಲ್ಲಿ ಅನೇಕಾನೇಕ ಕಥೆಗಳು ಉಪಕಥೆಗಳು ಹಾಗೂ ಅಡ್ಡಕಥೆಗಳು ಹೆಣೆದುಕೊಂಡಿದೆ. ದೇವತಾಮುಖಿಗಳಾದ ಆಸ್ತಿಕ ಮಹಾಶಯರಿಗೆ ಈ ಮೂರ್ತಿಗಳ ವೈಶಿಷ್ಟ್ಯ ಮತ್ತು ಅಪರೂಪತೆ ಆಶ್ಚರ್ಯ ಉಂಟು ಮಾಡುವುದಲ್ಲದೆ, ಕುತೂಹಲ ಉಂಟುಮಾಡಿ ಕ್ರಿಯಾಶಕ್ತಿಯನ್ನು ಚುರುಕು ಗೊಳಿಸಿ ಪುರಾಣೇತಿಹಾಸಗಳನ್ನು ಅಧ್ಯಯನ ಮಾಡುವಂತೆ ಪ್ರಚೋದಿಸುವುದು ಮತ್ತು ಇತರ ಭಕ್ತರ ಜೊತೆ ವಿಚಾರ ವಿನಿಮಯ ಮಾಡಲು ಅವಕಾಶ ಮಾಡಿಕೊಡುವುದು. ಪ್ರತ್ಯೇಕ ಉನ್ನತ ವ್ಯಾಸಂಗ ಹಾಗೂ ಸಂಶೋಧನೆಗೆ ಇವು ಅರ್ಹ ವಿಷಯವಾಗಿದೆ.

ಶ್ರೀ ರಂಗನಾಥ ಪರಬ್ರಹ್ಮಣೇ ನಮಃ

# ಶ್ರೀಮದ್ಭಾಗವತ ಪುರಾಣ

---ಕಂದಾಡೈ ಕೇಶವನ್.

ಭಾರತೀಯರ ಆಧ್ಯಾತ್ಮಿಕ ಸಂಪತ್ತಿಗೆ ವೇದ. ವೇದಾಂಗ. ಉಪನಿಷತ್ತು, ಧರ್ಮಶಾಸ್ತ್ರಗಳು, ಸ್ಮೃತಿ ಇತಿಹಾಸ ಪುರಾಣಗಳು ತಮ್ಮ ಅನುಪಮ ಕೊಡುಗೆಯನ್ನು ಕೊಟ್ಟಿವೆ. ವೇದ ಉಪನಿಷತ್ತು ಸ್ಮೃತಿಗಳಲ್ಲಿ ಸಾರುವ ಆಧ್ಯಾತ್ಮಿಕ ತತ್ವಗಳು ಕ್ಲಿಷ್ಟವಾಗಿ ಸಾಮಾನ್ಯ ಮಾನವನಿಗೆ ಎಟುಕುದಿರಲು ಇತಿಹಾಸ ಪುರಾಣಗಳು ಮಾನವನಿಗೆ ಅತಿಸಮಿಪಪದಲ್ಲಿದ್ದು ಸುಲಭವಾಗಿ ಅರ್ಥವಾಗುವಂತೆ ಪುರಾಣಗಳ ರಚನೆಯಾದವು. ಇವುಗಳನ್ನು ಋಷಿಗಳು ತಮ್ಮ ಆಶ್ರಮಗಳಲ್ಲಿ ನೆರೆದ ಮಾನವರಿಗೆ ಕಥಾರೂಪವಾಗಿ ಭಗವಂತನ ದಿವ್ಯ ಮಹಿಮೆಗಳನ್ನು ಹೊಗಳಿ ಪಾಡಿದರು. ಅಂತಹ ಪುರಾಣಗಳಲ್ಲಿ ಭಾಗವತ ಪುರಾಣವು ರಮಣೀಯವಾದ ಪುರಾಣರತ್ನ. ಭಕ್ತಿಜ್ಞಾನ, ವೈರಾಗ್ಯಗಳ ಸಾರಸ್ವತ ಸಂಗಮ.

## ಪುರಾಣ :

ಪುರಾಣ ಪ್ರಾಶಸ್ತ್ಯವನ್ನು ಸಾರುವಾಗ ಛಾಂದೋಗ್ಯೋಪನಿಷತ್‌ನಲ್ಲಿ--

"ಋಗ್ವೇದಂ ಭಗವೋಧ್ಯೇಮಿ
ಯಜುರ್ವೇದಂ ಸಾಮವೇದಂ ಅಥರ್ವಣಮ್
ಚತುರ್ಥಮಿತಿಹಾಸಪುರಾಣಂ
ಪಂಚಮಂ ವೇದಾನಾಂ ವೇದಮಿತಿ"

ಋಕ್, ಯಜ್, ಸಾಮ, ಅಥರ್ವಣ ನಾಲ್ಕು ವೇದಗಳಾದರೆ, ಇತಿಹಾಸ ಪುರಾಣಗಳು ಐದನೆಯ ವೇದವೆಂದು ಈ ಶ್ಲೋಕ ಸಾರುತ್ತೆ. ವೇದವು ಸರ್ವ ಪುರುಷಾರ್ಥಗಳಿಗೆ ಅನುಕೂಲವಾದ ಕಲ್ಪತರು. ಆದರೆ ಚತುರ್ವಿಧ ಪುರುಷಾರ್ಥಗಳನ್ನು ಸಾಧಿಸಿ ಮೋಕ್ಷವನ್ನು ಪಡೆಯುವುದು ಬಹು ಕಷ್ಟವಾದ ಕೆಲಸ. ವೇದ ವೇದಾಂತಗಳಲ್ಲಿ ತಿಳಿಸಿರುವ ಜೀವನಧರ್ಮ ಸೂತ್ರಗಳು ತತ್ವಜ್ಞಾನ, ತನ್ನಿಷ್ಠತೆ ಆಚರಣೆ, ಸ್ವರೂಪ, ಫಲ, ಸಾಧನೆ -- ಇವುಗಳನ್ನು ಪುರಾಣಗಳಲ್ಲಿ ಕಥಾನಿರೂಪಣೆ ಉದಾಹರಣೆ ಮೂಲಕ ಋಷಿಗಳು ತಿಳಿಸಿರುತ್ತಾರೆ. ಪುರಾಣವೆಂದರೆ ಅತಿ ಪ್ರಾಚೀನವಾದುದು ಎಂಬುವ ಅರ್ಥನಿರೂಪಣೆ. ಪುರಾಣ ಎಂಬುವ ಶಬ್ದಕ್ಕೆ ನಿಘಂಟು ಹಾಗೂ ಪುರಾಣಗಳ ಪ್ರತಿಪಾದಿಸಿರುವ ಅರ್ಥಗಳು ಹಲವಾರು ಉದಾಹರಣೆಗೆ--

೧. "ಪುರಾ ಅತೀತಾನಾಗತಾನರ್ಥಾ ಭಣತಿ" ಅಣು ಧಾತುವನ್ನು ಆಶ್ರಯಿಸಿ ಪುರಾ = ಹಿಂದೆ, ಅತೀತಂ = ನಡೆದದ್ದು, ಅನಾಗತಂ ಬರಲಿರುವ ವಿಷಯಗಳು ಅಂದರೆ ಹಳೆಯ ಕಾಲದಲ್ಲಿ ನಡೆದು ವಿಷಯಗಳು ನಿತ್ಯನೂತನವಾಗಿ ಚಿರಕಾಲವೂ ಎಲ್ಲರಿಗೂ ಅನುಕೂಲವಾದ ಸತ್ಯ ಸಂಗತಿಗಳು. ಇದು ವಾಚಸ್ಪತಿಯ ವಾಕ್ಕು.

೨. ಪುರಾ ನೀಯತೇ (ಹಿಂದೆ ನಡೆದದ್ದು ಪುರಾಭವಂ ಪುರಾಣಂ -- ಇದು ಮಹರ್ಷಿ ಪಾಣಿನಿಯ ಅರ್ಥ.

೩. ಪುರಾ ನವಂ ಭವತಿ ಪುರಾಣಮ್ (ಯಾಸ್ಕ ನಿರುಕ್ತ)

೪. ಪುರಾ ಭವಮಿತಿ ಪುರಾಣಂ (ಶಬ್ದಕಲ್ಪದ್ರುಮ)

೫. ಪುರಾ ಪೂರ್ವಸ್ಮಿನ್ ಭೂತಮಿತಿ ಪುರಾಣಂ (ಅಮರ ಕೋಶ)

೬. ಪುರಾಣಂ ಪುರಾವೃತ್ತಂ (ನೀಲ ಕಂಠೀಯ)

೭. ಪುರಾ ನೀಯತೆ ಇತಿ ಪುರಾಣಂ (ವಾಚಸ್ಪತಿ)

೮. ವೇದಾರ್ಥಾದಧಿಕಂ ಮನ್ಯೇ ಪುರಾಣಾರ್ಥಂ. ವರಾನನೇ, ವೇದಾಃ ಪ್ರತಿಷ್ಠಿತಾ ಸರ್ವೇ ಪುರಾಣೇ ನಾತ್ರ ಸಂಶಯಃ (ನಾರದೀಯ)

೯. ಪುರಾ ಪರಂಪರಾ ವಷ್ಟಿ ಪುರಾಣಂ ತೇನವೈಃ ಸ್ಮೃತಂ. (ಪದ್ಮಪುರಾಣ) ಪ್ರಾಚೀನಕಾಲದ ವಿಷಯಗಳನ್ನು ಪರಂಪರೆಯಾಗಿ ಹೇಳುವುದರಿಂದ ಪುರಾಣ.

೧೦. ಪುರಾತನಸ್ಯ ಕಲ್ಪಸ್ಯ ಪುರಾಣಾನಿ ವಿದುರ್ಬುಧಾಃ (ಮತ್ಸ್ಯ ಪುರಾಣ)

೧೧. ಪ್ರಾಗ್ವೃತ್ತ ಕಥನಂ ಪುರಾಣಮ್ (ಶುಕ್ರ ನೀತಿ)

ಈ ಮೇಲ್ಕಂಡ ತಿಳಿರು ಬರುವುದು ವೇದಗಳು ಹೇಳುವ ತತ್ವಗಳನ್ನು ಬಹು ಸರಳವಾಗಿ ಅರ್ಥವಾಗುವಂತೆ ಕಥಾರೂಪವಾಗಿ ಹೃದಯಂಗಮವಾಗಿ ಹೇಳುವ ಗುಣಗಳು ಪುರಾಣಗಳಿಗಿವೆ ಎಂದು. ವೈದಿಕ ಸಾಹಿತ್ಯಗಳಲ್ಲೂ ಪುರಾಣಗಳ ಉಲ್ಲೇಖವಿರುವುದು ಗಮನಾರ್ಹ. ಸ್ಕಾಂದ ಪುರಾಣದಲ್ಲಿ "ಪುರಾಣಂ ಪಂಚಮೋವೇದ ಇತಿ ಬ್ರಹ್ಮಾನುಶಾಸನಂ" ಎಂಬುವುದಾಗಿಯೂ ಹೇಳಿರುತ್ತೆ. ಪುರಾಣಗಳಿಗೆ ಐದು ಲಕ್ಷಣಗಳಿರಬೇಕೆಂದು ವಿಷ್ಣುಪುರಾಣದಲ್ಲಿ ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ ಸರ್ವೇಷ್ವೇ ತೇಷು ಕಥ್ಯನ್ತೇ ವಂಶಾನು ಚರಿತಂ ಚ ಯತ್ (೧) ದೇಶ ಚರಿತ್ರೆಗಳ ಅಂಶ, (೨) ಸೃಷ್ಟಿ ಸ್ಥಿತಿಲಯಗಳ ಅಂಶ, (೩) ಉಪಸೃಷ್ಟಿ ಚರಿತೆ, (೪) ವಂಶಾವಳಿ ವಿವರ ಚರಿತ್ರೆ, (೫) ಮನ್ವಂತರ ಚರಿತ್ರೆ. ಪುರಾಣಗಳಲ್ಲಿ ಮಹಾಪುರಾಣಗಳು ಉಪಪುರಾಣಗಳೆಂಬ ಭೇದವಿದೆ.

ಮಹಾ ಪುರಾಣಗಳ ಲಕ್ಷಣಗಳನ್ನು ಹೇಳುವಾಗ ಸರ್ವ ವಿಸರ್ಗ ವೃತ್ತಿ, ರಕ್ಷೆ, ಮನ್ವಂತರ, ವಂಶ, ವಂಶಾನು ಚರಿತ್ರೆ, ಸಂಸ್ಥಹೇತು, ಅಪಾಶ್ರಯ ಎಂಬುವುಗಳು ಪುರಾಣಗಳ ಲಕ್ಷಣವೆಂದು ಸಾರುತ್ತವೆ. ಬ್ರಹ್ಮವೈವರ್ತಕ ಪುರಾಣವು ಭಾಗವತವನ್ನು ಮಹಾಪುರಾಣವೆಂದು ಸಾರುವಾಗ--

ಉತ್ಕೀರ್ತನಂ ಹರೇರೇವ
ದೇವಾನಾಂ ಚ ಪೃಥಕ್
ದಶಾಧಿಕಂ ಲಕ್ಷಣಂ ಚ
ಮಹತಾಂ ಪರಿಕೀರ್ತಿತಮ್

ಎಂಬುವುದಾಗಿ ಸಾರುತ್ತದೆ. ಶ್ರೀಮದ್ಭಾಗವತವು ಮಹಾ ಪುರಾಣಗಳಲ್ಲಿಯೂ-- ಸಾತ್ವಿಕ ಪುರಾಣ ವರ್ಗಕ್ಕೆ ಸೇರಿದೆ. ಮತ್ಸ್ಯಪುರಾಣ ಪ್ರಕಾರ, "ಸಾತ್ವಿಕೇಷು ಪುರಾಣೇಷು ಮಾಹಾತ್ಮ್ಯ ಮಧಿಕಂ ಹರೇಃ" ಯಾವ ಪುರಾಣಗಳಲ್ಲಿ ವಿಷ್ಣುವಿನ ಮಹಾತ್ಮೆಯನ್ನು ಹೆಚ್ಚಾಗಿ ಹೇಳುತ್ತೋ ಅದೇ ಸಾತ್ವಿಕ ಪುರಾಣವೆಂದು ತಿಳಿಯಬೇಕು. ಪದ್ಮಪುರಾಣದಲ್ಲಿ ಸಾತ್ವಿಕ ಪುರಾಣಗಳನ್ನು ಉಲ್ಲೇಖಿಸುವಾಗ--

ವೈಷ್ಣವಂ ನಾರದೀಯಂ ಚ
ತಥಾ ಭಾಗವತಂ ಶುಭಂ
ಗಾರುಡಂ ಚ ತಥಾ ಪಾದ್ಮಂ
ವಾರಾಹಂ ಶುಭದರ್ಶನೇ

ಸಾತ್ವಿಕಾನಿ ಪುರಾಣಾನಿ
ವಿಜ್ಞೇಯಾನಿ ಶುಭಾನಿ ವೈ

ವಿಷ್ಣು, ನಾರದ, ಭಾಗವತ, ಗರುಡ, ವರಾಹ, ಪದ್ಮಪುರಾಣಗಳು ವಿಷ್ಣುವನ್ನು ಪರಬ್ರಹ್ಮನೆಂದು, ಪರತತ್ವವೆಂದೂ ಸಾರುವುದರಿಂದ ಅವುಗಳು ಸಾತ್ವಿಕ ಪುರಾಣಗಳೆಂದು ಕರೆಯಲ್ಪಡುತ್ತವೆ. ಶ್ರೀಹರಿ ಪ್ರಸಾದ ಶಾಸ್ತ್ರಿಗಳು ಅಷ್ಟಾದಶ ಪುರಾಣ ವಾಙ್ಮಯ ವನ್ನು ಈ ರೀತಿಯಾಗಿ ವಿಂಗಡಿಸಿದ್ದಾರೆ.

೧. ವಿಜ್ಞಾನಕ್ಕೆ ಪ್ರಾಶಸ್ತ್ಯ ಕೊಟ್ಟಿರುವ ಪುರಾಣಗಳು : ಗಾರುಡ, ಅಗ್ನೇಯ, ನಾರದೀಯ.

೨. ಪ್ರಕ್ಷಿಪ್ತಗಳಿಂದ ಬೆಳೆದು ಬಂದವು : ಬ್ರಹ್ಮ ಭಾಗವತ, ಬ್ರಹ್ಮವೈವರ್ತ ಪುರಾಣಗಳು.

೩. ತೀರ್ಥ ವ್ರತ ಮಹಾತ್ಮಗಳಿರುವ : ಪಾದ್ಮ ಸ್ಕಾಂದ ಭವಿಷ್ಯತ್ ಪುರಾಣಗಳು.

೪. ಚಾರಿತ್ರ, ಚರಿತ್ರೆ, ವಂಶಾವಳಿ : ಬ್ರಹ್ಮಾಂಡ, ವಾಯು ಪುರಾಣಗಳು.

೫. ಮತಗಳಿಗೆ ಹೆಚ್ಚಗೆ ಪ್ರಾಶಸ್ತ್ಯ ಕೊಟ್ಟ ಪುರಾಣ ಗಳು : ಲಿಂಗ, ವಾಮನ, ಮಾರ್ಕಂಡೇಯ.

೬. ವಿಷ್ಣುವಿನ ಅವತಾರ ವಿಶೇಷವಾಗಿರುವ ಪುರಾಣಗಳು : ಮತ್ಸ್ಯ ಕೂರ್ಮ, ವರಾಹ.

ಅಷ್ಟಾದಶ ಪುರಾಣಗಳ ಕರ್ತೃ ವೇದವ್ಯಾಸರೆಂ ಬುವುದಕ್ಕೆ ಪುಷ್ಟಿ. ಅಷ್ಟಾದಶ ಪುರಾಣಾನಾಂ ಕರ್ತಾ ಸತ್ಯವತೀ ಸುತಃ --ಎಂಬುವವಾಕ್ಯ. ಪ್ರಾಚೀನ ಕಾಲದಿಂದ ಕರ್ಮ ಪ್ರವೃತ್ತಿಗಳನ್ನು ಎತ್ತಿಹಿಡಿಯುವ ರಾಮಾಯಣ ಭಾರತಗಳನ್ನು ಹಗಲು ಹೊತ್ತಿನಲ್ಲೂ, ಭಕ್ತಿ ಜ್ಞಾನ ವೈರಾಗ್ಯಗಳನ್ನು ಬೋಧಿಸುವ ಭಾಗವತವನ್ನು ರಾತ್ರಿಪಾರಾಯಣ ಮಾಡಿದರೆ ಮಹತ್ ಪ್ರಯೋಜನವೆಂದು ಪ್ರತೀತಿ ಇದೆ. ಹರಿವಂಶ, ವಿಷ್ಣುಪುರಾಣ, ಶ್ರೀಮದ್ಭಾಗವತಗಳಲ್ಲಿ ಬರುವ ಕಥೆ ತತ್ವಗಳು ಒಂದೇ ಆಗಿವೆ.

ಭಾಗವತ ಮಾಹಾ ಪುರಾಣಕ್ಕೆ ಈ ಕೆಳಗಿನ ವ್ಯಾಖ್ಯಾನಗಳು ಬಹು ಪ್ರಸಿದ್ಧವಾಗಿವೆ.

೧. ಅದ್ವೈತ ಮತಕ್ಕೆ ಅದರ ಸಿದ್ಧಾಂತವನ್ನು ಎತ್ತಿ ಹಿಡಿಯುವ ಶ್ರೀಧರ ಸ್ವಾಮಿಗಳ ವ್ಯಾಖ್ಯಾನ.

ವಿಶಿಷ್ಟಾದ್ವೈತ ಮತವನ್ನು ಅವಲಂಬಿಸಿ ಬರೆದಿರುವ ಸುದರ್ಶನ ಸೂರಿಯವರ ವ್ಯಾಖ್ಯಾನ ಮತ್ತು ವೀರರಾಘವಾಚಾರ್ಯರ ವ್ಯಾಖ್ಯಾನ ಚಂದ್ರ ಚಂದ್ರಿಕ.

೩. ಮಾಧ್ವಮತಾನುಗುಣವಾದ ವಿಜಯಧ್ವಜಾ ಚಾರ್ಯರ ವ್ಯಾಖ್ಯಾನ.

೪. ಶುಕದೇವಾಚಾರ್ಯರ ನಿಂಬಾರ್ಕ ಪದ್ಧತಿಯ ಅನುಸಾರವಾದ ವ್ಯಾಖ್ಯಾನ.

೫. ವಲ್ಲಭಮತಾನುಸಾರವಾದ ವಲ್ಲಭಾಚಾರ್ಯರ ವ್ಯಾಖ್ಯಾನ.

೬. ಗಿರಿಧರಾಚಾರ್ಯರ ಆಧ್ಯಾತ್ಮಿಕ ಟೀಕೆ.

೭. ಜೀವಗೋಸ್ವಾಮಿಯವರ ಕ್ರಮ ಸಂದರ್ಭಂ.

೮. ವಿಶ್ವನಾಥ ಚಕ್ರವರ್ತಿಯವರ ಸಾರಾರ್ಥ ದರ್ಶಿನಿ.

೯. ಶ್ರೀಹರಿ ವಿರಚಿತ ಹರಿ ಭಕ್ತಿ ರಸಾಯನಂ.

೧೦. ಚದಲವಾಡ ಜಯರಾಮಶಾಸ್ತ್ರಿಯವರ ತತ್ವದರ್ಶಿನಿ ವ್ಯಾಖ್ಯಾನ.

೧೧. ಮಧುಸೂದನ ಸರಸ್ವತಿಯವರ ಗೂಢಾರ್ಥದೀಪಿಕ.

ಭಾಗವತ ಶಬ್ದಕ್ಕೆ ಭಗವಂತನನ್ನು ಸದಾ ದೇವರೆಂದು ಭಜಿಸುವ ಭಕ್ತನಿಗೆ ಭಾಗವತ ಎಂಬುವುದಾಗಿ ಹೆಸರು.

ಸರ್ವ ಭೂತೇಷು ಯಃ ಪಶ್ಯೇತ್
ಭಗವದ್ಭಾವಮಾತ್ಮನಃ
ಭೂತಾನಿ ಭಗವತ್ಯಾತ್ಮನ್ ಏಷ
ಭಾಗವತೋತ್ತಮಃ

ಎಲ್ಲ ಭೂತಗಳಲ್ಲಿ ಭಗವಂತನನ್ನೂ ಭಗವಂತನಲ್ಲಿ ಎಲ್ಲಾ ಭೂತಗಳನ್ನು ನೋಡುವವನು ಭಗವದ್ಭಕ್ತ. ಭಾಗವತೋತ್ತಮ.

ಭಗವಂತನಿಗೆ ಸಂಬಂಧಪಟ್ಟ ಪುರಾಣ ಭಾಗವತ ಪುರಾಣ. ಭಗವಾನ್ ಶಬ್ದಕ್ಕೆ "ಬ್ರಹ್ಮೇತಿ ಪರಮಾತ್ಮೇತಿ ಭಗವಾನಿತಿ ಶಬ್ದತೆ" ಪರಬ್ರಹ್ಮ ಪರಮಾತ್ಮನೊಬ್ಬನೇ ಭಗವಾನ್, ಭಗ ಎಂಬ ಶಬ್ದಕ್ಕೆ--

"ಐಶ್ವರ್ಯಸ್ಯ ಸಮಗ್ರಸ್ಯ
ವೀರ್ಯಸ್ಯ ಯಶಸಃ
ಶ್ರೀಯಃ ಜ್ಞಾನ ವೈರಾಗ್ಯ ಯೋಶ್ಚಾಪಿ
ಷಣ್ಣಾಂ ಭಗ ಇತೀರಣಾ

ಎಂಬುವ ಪ್ರಮಾಣ ಶ್ಲೋಕದಿಂದ ಅಸಾಧಾರಣವಾದ ಸಮಗ್ರವಾದ ಐಶ್ವರ್ಯ, ಯಶಸ್ಸು, ಶ್ರೀ, ಜ್ಞಾನ, ವೈರಾಗ್ಯ ಇವುಗಳನ್ನು ಉಳ್ಳವ ಪರಮಾತ್ಮನು. ಭಗವಂತನನ್ನು ಕಾಣುವವನು ಭಾಗವತನು. ಅವರನ್ನು ಕುರಿತು ಹೇಳುವ ಗ್ರಂಥಕ್ಕೆ ಭಾಗವತವೆಂದೂ, ಕೆಲವರು ಭಗವಾನ್ ಯೇಷಾಂ ದೇವತಾಭಾಗವತಃ ಮತ್ತು ಕೆಲವರು ಭಗವತಃ ಇದಂ ಭಾಗವತಂ ಎಂಬುವುದಾಗಿಯೂ ವ್ಯಾಖ್ಯಾನ ಮಾಡುತ್ತಾರೆ. ಭಾಗವತವನ್ನು ಭಕ್ತಿಯಿಂದ ಮಾತ್ರ ಓದಿ ತಿಳಿಯಬೇಕು. ಬೇರೆ ಮಾರ್ಗದಿಂದಲ್ಲ ಎಂಬುವುದಾಗಿ ಹೇಳುವಾಗ ಆರ್ಯರು "ಭಕ್ತ್ಯಾ ಭಾಗವತಂ ಜ್ಞೇಯಂ ನ ವ್ಯುತ್ಪತ್ತ್ಯಾ ನ ಟೀಕಯಾ" ಎಂಬುವುದಾಗಿ ಕಠಿಣವಾಗಿಯೇ ನುಡಿದಿದ್ದಾರೆ. ಭಗವತ್ ಶಬ್ದದಿಂದ ಮೊದಲಾಗುವ ಗ್ರಂಥಗಳು ನಮ್ಮಲ್ಲಿ ಕೇವಲ ಎರಡೇ. ಭಗವಂತನ ಮುಖಾರವಿಂದಗಳಿಂದ ಹೊರಟ ಭಗವದ್ಗೀತೆ. ಭಗವಂತನ ಕಲ್ಯಾಣಗುಣಗಳನ್ನು ಅವನ ಚರಿತೆಯನ್ನು ಹೇಳುವ ಭಾಗವತ ಮಹಾಪುರಾಣ. ಭಗವತಿಯನ್ನು ನುತಿಸುವ ದೇವೀ ಭಾಗವತವು ಕೂಡ ಆದರಣೆಯವಾದ ಗ್ರಂಥವೇ. ವಿಷ್ಣುಪುರಾಣದಲ್ಲಿ--

ಏವಮೇಷ ಮಹಾಶಬ್ದೋ
ಮೈತ್ರೇಯ ಭಗವಾನಿತಿ
ಪರಮಬ್ರಹ್ಮಭೂತಸ್ಯ
ವಾಸುದೇವಸ್ಯ ನಾನ್ಯಗಃ

ಪರಬ್ರಹ್ಮ ಪರಮಾತ್ಮನಾದ ವಾಸುದೇವನೊಬ್ಬನೇ ಭಗವಾನನು ಎಂಬುವುದಾಗಿ ಪೋಷಿಸಲ್ಪಟ್ಟಿದೆ. ಕೆಲವು ಪುರಾಣಗಳು ಹಯಗ್ರೀವ ಬ್ರಹ್ಮವಿದ್ಯೆಯು ಭಾಗವತದ ಒಂದು ಮುಖ್ಯಲಕ್ಷಣವೆಂದು ಹೇಳುವಾಗ ಈ ಶ್ಲೋಕವನ್ನು ಉದಹರಿಸುತ್ತಾರೆ.

ಹಯಗ್ರೀವ ಬ್ರಹ್ಮವಿದ್ಯಾ
ಯತ್ರ ವೃತ್ರವಧಸ್ತಥಾ
ಗಾಯತ್ರ್ಯಾ ಚ ಸಮಾರಂಬಃ
ತತ್ರ ಭಾಗವತಂ ವಿದುಃ

ಭಾಗವತದ ಪ್ರಥಮ ಸ್ಕಂದದ ಮೊದಲನೆಯ ಅಧ್ಯಾಯದಲ್ಲಿ ಭಾಗವತ ಮಹಿಮೆಯನ್ನು ಸೂತಪುರಾಣಿಕರು ಶೌನಕಾದಿಗಳಿಗೆ ಹೇಳುವಾಗ--

"ನಿಗಮ ಕಲ್ಪ ತರೋರ್ಗಲಿತಂ ಫಲಂ
ಶುಕಮುಖಾದಮೃತ ದ್ರವ ಸಂಯುತಮ್
ಪಿಬತ ಭಾಗವತಂ ರಸಮಾಲಯಂ
ಮುಹುರಹೋ ರಸಿಕಾ ಭುವಿ ಭಾವುಕಾಃ

ವೇದವೆಂಬ ಕಲ್ಪವೃಕ್ಷದಲ್ಲಿ ಬಿಟ್ಟ ಹಣ್ಣು, ಶುಕ ಮುನಿಯೆಂಬ ಶುಕ ಪಕ್ಷಿಯ ಮುಖಾರವಿಂದ ದಿಂದ ಅಮೃತ ಸಲಿಲದಿಂದ ಪರಿಪೂರ್ಣವಾದ ಹಣ್ಣು. ರಸಭರಿತವಾದ ಹಣ್ಣು ಭುವಿಯಲ್ಲಿ ಸುಲ

ನವಾಗಿ ಸಿಗುವ ಹಣ್ಣು. ಶ್ರೀಮದ್ಭಾಗವತವೆಂಬ ಹಣ್ಣನ್ನು ದೇಹವಿರುವವರೆಗೂ ಮುಕ್ತಿ ಬಂದರೂ ಕುಡಿಯಿರಿ ಎಲೈ ಭಾವುಕ ರಸಿಕರೆ -- ಎಂಬುವುದಾಗಿ ಹೇಳಿದ್ದಾರೆ. ಪದ್ಮ ಪುರಾಣದಲ್ಲಿ ಭಗವದ್ ಭಕ್ತರ ಭಾಗವತ ಮಾಹಾತ್ಮೆಯನ್ನು ವಿಸ್ತಾರವಾಗಿ ವಿವರಿಸಲ್ಪಟ್ಟಿದೆ. ಭಾಗವತವನ್ನು ಕುರಿತು ಭಗವಂತನೇ--

ಶ್ರೀಮದ್‌ಭಾಗವತಂ ನಾಮ
ಪುರಾಣಂ ಲೋಕವಿಶ್ರುತಮ್
ಶೃಣುಯಾಚ್ಛ್ರದ್ಧಯಾ ಯುಕ್ತೋ
ಮಮ ಸಂತೋಷ ಕಾರಣಮ್
ನಿತ್ಯಂ ಭಾಗವತಂ ಯಸ್ತು
ಪುರಾಣಂ ಪಠತೇ ನರಃ
ಪ್ರತ್ಯಕ್ಷರಂ ಭವೇತ್ತಸ್ಯ
ಕಪಿಲಾದಾನಜಂ ಫಲಂ
ಯಃ ಪಠೇತ್ ಪ್ರಯತೋ ನಿತ್ಯಂ
ಶ್ಲೋಕಂ ಭಾಗವತಂ ಸುತ
ಯಚ್ಛನ್ತಿ ವೈಷ್ಣವೇ ಭಕ್ತ್ಯಾ
ಶಾಸ್ತ್ರಂ ಭಾಗವಂತಂ ಹಿ ಮೇ
ಕಲ್ಪ ಕೋಟಿ ಸಹಸ್ರಾಣಿ
ಮಮ ಲೋಕೇ ವಸಂತಿ ತೇ
ಶ್ಲೋಕಾರ್ಧಂ ಶ್ಲೋಕಪಾದಂ
ವಾ ವರಂ ಭಾಗವತಂ ಗೃಹೇ
ಶತಶೋಽಥ ಸಹಸ್ರೈಶ್ಚ
ಕಿಮನ್ಯೈಃ ಶಾಸ್ತ್ರಸಂಗ್ರಹೈಃ
ಶ್ರೀಮದ್ಭಾಗವತಂ ಪುಣ್ಯಂ
ಆಯುರಾರೋಗ್ಯ ವರ್ಧನಮ್
ಪಠನಾತ್ ಶ್ರವಣಾದ್ವಾಪಿ
ಸರ್ವ ಪಾಪೈಃ ಪ್ರಮುಚ್ಯತೇ

ಶ್ರೀ ಭಗವಂತನು ತನ್ನ ಪುತ್ರನಾದ ಬ್ರಹ್ಮನಿಗೆ ಭಾಗವತ ಮಹಿಮೆಯನ್ನು ಹೇಳುವಾಗ ಭಾಗವತವನ್ನು ನಿತ್ಯವು ಶ್ರವಣ ಮಾಡಿದರೆ ತನಗೆ ಸಂತೋಷವಾಗುತ್ತದೆ ಎಂದು ಭಾಗವತದ ಒಂದೊಂದು ಅಕ್ಷರ ಪಾರಾಯಣಕ್ಕೆ ಒಂದೊಂದು ಕಪಿಲ ಗೋದಾನ ಫಲ. ಪ್ರತಿ ನಿತ್ಯ ಭಾಗವತದ ಅರ್ಧರ್ಧ ಶ್ಲೋಕ ಪಠಿಸಿದರೂ ಸಾವಿರ ಗೋವುಗಳ ದಾನದ ಫಲ. ಭಾಗವತದ ಒಂದು ಶ್ಲೋಕದ ಪಠಣ ಸಾವಿರಾರು ಶಾಸ್ತ್ರಗಳ ಓದುವ ಫಲ. ಭಾಗವತದ ಪಾರಾಯಣದಿಂದ ಆಯುಸ್ಸು, ಆರೋಗ್ಯ ಪ್ರಾಪ್ತಿ ಸಮಸ್ತ ಪಾಪಗಳ ಪರಿಹಾರ ಇತ್ಯಾದಿ ಎಂಬುವುದಾಗಿ ಸ್ವಾಮಿ ಉಪದೇಶಮಾಡಿದ್ದಾನೆ. ಕೊನೆಯಲ್ಲಿ ಭಗವಂತನು

ಧನ ಪುತ್ರಾಂಸ್ತಥಾ ದಾರಾನ್
ಭಕ್ತಿಂ ಚ ಪ್ರದದಾಮ್ಯಹಂ

ಎಂಬುವುದಾಗಿ ಮನುಷ್ಯನಿಗೆ ಹಣ, ಮಡದಿ ಮಕ್ಕಳನ್ನು ನೀಡುತ್ತೇನೆ ಎಂಬುವುದಾಗಿ ತಿಳಿಸಿದ್ದಾನೆ. ಭಾಗವತದಲ್ಲಿ ಬರುವ ಕಥೆ ಶ್ರೀಕೃಷ್ಣನ ರಮಣೀಯ ಕಥಾ ಪ್ರಸಂಗಗಳು. ಭಗವಂತನ ಅನೇಕ ಅವತಾರಗಳ ಅದ್ಭುತ ಚರಿತ್ರೆ. ಅವನ ಗುಣ ಕರ್ಮಗಳು, ಮಹಿಮೆ, ಭಕ್ತಿ, ಧ್ಯಾನ, ಜ್ಞಾನ, ವೈರಾಗ್ಯಗಳ ಹಿರಿಮೆ ಗರಿಮೆಗಳು. ಇಲ್ಲಿ ಬರುವ ಭಕ್ತರ ಮಹಿಮಾ ಕಥೆಗಳು ಹಲವಾರು ಧ್ರುವಚರಿತೆ. ಭೀಷ್ಮನ ಚರಿತೆ, ಕುಂತಿ, ಅರ್ಜುನ, ಉದ್ಧವ, ಗಜೇಂದ್ರ, ಪ್ರಹ್ಲಾದ, ಕುಚೇಲ, ಅಜಾಮಿಳ, ಗೋಪಿ ಕಾಸ್ತ್ರೀಯರು, ಜಡಭರತ, ಅಂಬರೀಷ, ರಂತಿ ದೇವ ಮುಂತಾದವರು. ಇವರ ಚರಿತೆಗಳನ್ನು ಓದಿದಷ್ಟು ಭಕ್ತಿ ಉಕ್ಕಿ ಭಾವುಕರಿಗೆ ಭಾವನಾ ಲೋಕಕ್ಕೆ ಕೊಂಡೊಯ್ಯುತ್ತದೆ. ದಶಮಸ್ಕಂದವಂತೂ ಭಕ್ತಿಯ ಮಾನಸ ಸರೋವರ. ಭಾಗವತವು ೧೨ ಸ್ಕಂದಗಳ ೧೮,೦೦೦ ಶ್ಲೋಕಗಳ ಪವಿತ್ರವಾದ ಪುರಾಣ.

ಭಾಗವತದ ದಶಮಸ್ಕಂದವು ಶ್ರೀಕೃಷ್ಣನ ಲೀಲೆಗಳನ್ನು ರಸಮಯವಾಗಿ ಹೇಳಿರುವುದರಿಂದ "ರಸಾನಾಂ ರಸತಮಃ" ಕೃಷ್ಣ ಕಥೆ ಕಲ್ಪಿತ ಕಥಾಮಂಜರಿಯಲ್ಲ ಪರಮಾತ್ಮನ ಅಪ್ರಾಕೃತ ಮಹಿಮೆಗಳು. ಜಯದೇವನ ಗೀತ ಗೋವಿಂದ. ಶ್ರೀ ವಾದಿರಾಜರ ರುಕ್ಮಿಣೀಶವಿಜಯ. ಲೀಲಾಶುಕರ ಕೃಷ್ಣ ಕರ್ಣಾಮೃತ. ಅನಂತಭಟ್ಟನ ಭಾಗವತ ಚಂಪೂ, ಪೋತನ ಭಾಗವತ ಕೃತಿ. ನರಸಿಂಹಾಚಾರ್ಯರ ಶ್ರೀ ಹರಿ ಚರಿತೆ. ಶ್ರೀ ವೇದಾಂತ ದೇಶಿಕರ ಯಾದವಾಭ್ಯುದಯ, ಕನ್ನಡದ ಕೃಷ್ಣ ಚರಿತೆ. ಮೆಪ್ಪತೂರು ನಾರಾಯಣ ಭಟ್ಟಾತಿರಿಪಾದರ ಸಂಸ್ಕೃತದ ನಾರಾಯಣೀಯಂ. ಶ್ರೀ ಮದ್ಭಾಗವತದ ಪ್ರತಿರೂಪವಾದ ಭಕ್ತಿಕಾವ್ಯ ನಾರಾಯಣೀಯಂ ಕಾವ್ಯದಲ್ಲಿ ಶ್ರೀಕೃಷ್ಣನನ್ನು ಕುರಿತು ಹಾಡುವ ಈ ಶ್ಲೋಕ ಮನೋಹರವಾಗಿದೆ.

ವಿಧೂಯ ಕ್ಲೇಶಾನ್ ಮೇ
ಕುರು ಚರಣಯುಗ್ಮಂ ಧೃತರಸಂ
ಭವತ್ ಕ್ಷೇತ್ರ ಪ್ರಾಪ್ತೌ
ಕರಮಪಿ ಚ ತೇ ಪೂಜನವಿಧೌ
ಭವತ್ ಮೂರ್ತ್ಯಾ ಲೋಕೇ
ನಯನಮಥ ತೇ ಪಾದ ತುಲಸೀ
ಪರಿಘ್ರಾಣೇ ಘ್ರಾಣಂ ಶ್ರವಣಮಪಿ
ತೇ ಚಾರು ಚರಿತೇ

ಭಾಗವತದಲ್ಲಿ ಶ್ರೀಕೃಷ್ಣನ ಗುಣಗಾನ, ಭಕ್ತರ ಅನೇಕ ಸ್ತೋತ್ರ ಜಾಲ ಕೃಷ್ಣನ ಮೇಲೆ ಇರುವ ಪ್ರೇಮಭಾವನೆ ಭಕ್ತಿಮಾರ್ಗಕ್ಕೆ ನಮ್ಮನ್ನು ಕೊಂಡೊಯ್ಯುತ್ತವೆ. ಭಕ್ತನ ನಿರ್ಹೇತುಕ ಭಕ್ತಿ ಭಾಗವತದಲ್ಲಿ ವಿಶೇಷವಾಗಿ ನಾವು ಕಾಣಬಹುದು. ಸಾತ್ವಿಕ ಭಕ್ತಿಯಿಂದ ಶರಣಾಗತನು ಭಕ್ತಿಯೋಗದ ಶಿಖರವನ್ನು ಏರುವ ಅನೇಕ ನಿದರ್ಶನಗಳು ಉದಾಹರಣೆಗಳು ಭಾಗವತದಲ್ಲಿ ಕಂಗೊಳಿಸುವವು. ಭಕ್ತಿ ಶಾಸ್ತ್ರದ ಶಾಂತ, ದಾಸ್ಯ ಸಖ್ಯ ವಾತ್ಸಲ್ಯ ಮಧುರ ಎಂಬುವ ಐದು ಭಾವಗಳನ್ನು ಶ್ರವಣ, ಕೀರ್ತನ, ಸ್ಮರಣ, ಪಾದ ಸೇವನ, ಅರ್ಚನ, ವಂದನ, ದಾಸ್ಯ ಸಖ್ಯ ಮತ್ತು ಅರ್ಪಣ ಎಂಬ ಒಂಬತ್ತು ವಿಧಗಳ ಪೂರ್ಣ ಪರಿಚಯ ಭಾಗವತದಲ್ಲಿದೆ. ಮುಕ್ತಿಯು ಭಕ್ತಿಯದಾಸಿ ಎಂಬುವುದು ಭಾಗವತದಲ್ಲಿ ಸೂಚಿಸಲ್ಪಟ್ಟಿದೆ.

ಯದಿ ಭವತಿ ಮುಕುಂದೇ
ಭಕ್ತಿ ರಾನಂದ ಸಾಂದ್ರಾ
ವಿಲುಠತಿ ಚರಣಾಬ್ಜೇ
ಮೋಕ್ಷ ಸಾಮ್ರಾಜ್ಯಲಕ್ಷ್ಮೀ

ಎಂಬುವುದು ಅಬಾಧಿತಸತ್ಯಸಂಗತಿ ಹೌದಷ್ಟೆ? ಕುರುಕುಲದ ಭೀಷ್ಮಪಿತಾಮಹರು ರಾಜಸೂಯ ಯಾಗದಲ್ಲಿ ಶ್ರೀಕೃಷ್ಣನನ್ನು ಅಗ್ರಪೂಜೆಗೆ ಅರ್ಹನೆಂದು ತನ್ನ ನಿಲುವನ್ನು ಸಮರ್ಥಿಸಿಕೊಳ್ಳುವಾಗ--

ಪೂಜ್ಯತಾಯಾಂ ಚ ಗೋವಿಂದೇ
ಹೇತೂ ದ್ವಾವಪಿ ಸಂಸ್ಥಿತೌ
ವೇದ ವೇದಾಂಗ ವಿಜ್ಞಾನಂ
ಬಲಂ ಚಾತ್ಯಧಿಕಂ ತಥಾ

ಶ್ರೀಕೃಷ್ಣನು ವೇದವೇದಾಂಗ ವಿಜ್ಞಾನ ಪಾರಂಗತ ಹಾಗೂ ಭುವಿಯಲ್ಲಿ ಅತ್ಯಧಿಕ ಬಲವಂತ ಎಂಬುವ ಕಾರಣದಿಂದ ಭೀಷ್ಮರು ಕೃಷ್ಣನ ಹೆಸರು ಸೂಚಿಸಿದರು. ಶ್ರೀಕೃಷ್ಣನ ಬಾಲಲೀಲೆ, ಚೆಂಡಾಟ, ಯಮುನಾವಿಹಾರ, ರಾಸಲೀಲೆ, ಅದ್ಭುತವಾದವು, ಚಿರಸ್ಮರಣೀಯವಾದವು, ವಿಷ್ಣುವಿನ ಅವತಾರ ವಿಶೇಷಗಳನ್ನು ವರ್ಣಿಸುವುದರಲ್ಲಿ ವ್ಯಾಸರಿಗೆ ತೃಪ್ತಿಯಿಲ್ಲ. ಪರವಾಸುದೇವನಾದ ಪರಮಾತ್ಮನು ವ್ಯೂಹ, ವಿಭವ, ಅಂತರ್ಯಾಮಿ ಅರ್ಚಾವತಾರಗಳನ್ನು ಧರಿಸಿದಾಗ ದುಷ್ಟ ಶಿಕ್ಷಣ ಶಿಷ್ಟರಕ್ಷಣೆ ಅವನ ಗುರಿ ಎಂಬುವುದು ಪ್ರತ್ಯಕ್ಷ ಪ್ರಮಾಣಗಳಿಂದ ಭಾಗವತ ಪುರಾಣದಲ್ಲಿ ನಾವು ಓದಿದಾಗ ಭಕ್ತಿ ಭಾವನೆಯಿಂದ ಪುಲಕಿತರಾಗುತ್ತೇವೆ.

## ಶ್ರೀ ಕೃಷ್ಣಾವತಾರ ವರ್ಣನೆ

ಶ್ರೀಕೃಷ್ಣನ ಜನನವಾದಾಗ ದಿಕ್ಕುಗಳೆಲ್ಲವೂ ನಿರ್ಮಲವಾದವು. ಗಗನದಲ್ಲಿ ನಿರ್ಮಲವಾದ ನಕ್ಷತ್ರಗಳು ಉದಯಿಸಿದರು. ನದಿಗಳು ತಿಳಿಯಾದವು. ವನ ಜಲಾಶಯಗಳಲ್ಲಿ ಹೂಹಣ್ಣು ಕಂಗೊಳಿ

ಓದಿರಿ. ಓದಿಸಿರಿ.

# ಸಪ್ತಗಿರಿ

ತಿರುಮಲೆ -- ತಿರುಪತಿ ದೇವಸ್ಥಾನಗಳ ಧಾರ್ಮಿಕ ಮಾಸಪತ್ರಿಕೆ ಸಪ್ತಗಿರಿ.

ತೆಲುಗು ತಮಿಳು ಕನ್ನಡ ಹಿಂದಿ ಆಂಗ್ಲ ಭಾಷೆಗಳಲ್ಲಿ ಬೇರೆ ಬೇರೆಯಾಗಿ ಪ್ರಕಟವಾಗುವ ಪತ್ರಿಕೆ.

ಆಧ್ಯಾತ್ಮಿಕ, ಸಾಂಸ್ಕೃತಿಕ, ಧಾರ್ಮಿಕ ವಿಷಯಗಳೊಂದಿಗೆ ವಿಶೇಷಗಳೊಂದಿಗೆ ಪ್ರಕಟವಾಗುವ ಪತ್ರಿಕೆ.

ಸಪ್ತಗಿರಿ ಚಂದಾದಾರರಾಗ ಬಯಸುವವರು ಈ ಕೆಳಗಿನ ಸೂಚನೆಗಳನ್ನು ಗಮನಿಸಬೇಕೆಂದು ಪ್ರಾರ್ಥನೆ.

* ಸಪ್ತಗಿರಿಯ ವಾರ್ಷಿಕ ಚಂದಾ ಹನ್ನೆರಡು ರೂಪಾಯಿಗಳು ಮಾತ್ರ. ಎಷ್ಟು ವರ್ಷದ ಚಂದಾ ಹಣವನ್ನಾದರೂ ತುಂಬಬಹುದು. (ಆಜೀವ ಸದಸ್ಯತ್ವವಿಲ್ಲ)
* ತಮ್ಮ ಚಂದಾ ಹಣವನ್ನು ಸಂಪಾದಕರು, ಸಪ್ತಗಿರಿ, ತಿ.ತಿ.ದೇ. ತಿರುಪತಿ ಇವರ ಹೆಸರಿಗೆ ಎಂ.ಓ/ಡಿ.ಡಿ./ಪಿ.ಓ. ರೂಪದಲ್ಲಿ ಕಳುಹಿಸಿ (ಚೆಕ್‌ಗಳನ್ನು ಅಂಗೀಕರಿಸಲಾಗದು).
* ತಮಗೆ ಯಾವ ಭಾಷೆಯ ಸಪ್ತಗಿರಿ ಬೇಕೆಂಬುದನ್ನು ಸ್ಪಷ್ಟವಾಗಿ ಬರೆಯಿರಿ.
* ತಮ್ಮ ಪೂರ್ಣ ವಿಳಾಸವನ್ನು ಬಿಡಿಬಿಡಿಯಾದ ಅಕ್ಷರಗಳಲ್ಲಿ ಸ್ಪಷ್ಟವಾಗಿ ಬರೆಯಿರಿ.
* ಚಂದಾ ಹಣ ತಲುಪಿದ ಮಾರನೆಯ ತಿಂಗಳಿನಿಂದ ಸಪ್ತಗಿರಿಯನ್ನು ಕಳುಹಿಸಲಾಗುವುದು.
* ಚಂದಾ ಹಣವನ್ನು ಕಳುಹಿಸಿದ 30 ದಿನಗಳಲ್ಲಿ ಸಪ್ತಗಿರಿ ತಮಗೆ ಬಾರದಿದ್ದಲ್ಲಿ ತಮ್ಮ ಎಂ.ಓ./ಡಿ.ಡಿ. ಕ್ರಮಸಂಖ್ಯೆ ದಿನಾಂಕ ಮೊದಲಾದ ವಿವರಗಳೊಂದಿಗೆ ಪೂರ್ಣವಿಳಾಸವನ್ನು ನೀಡಿ ಕಾಗದ ಬರೆಯಿರಿ.

ಈ ಮೊದಲೇ ಚಂದಾದಾರರಾದವರಿಗೆ ಸೂಚನೆಗಳು :

* ತಮ್ಮ ಚಂದಾ ಮೊಬಲಗು ಮುಗಿಯುವ ಒಂದು ತಿಂಗಳ ಮೊದಲೇ ಪುನಃ ಚಂದಾಹಣವನ್ನು ಕಳುಹಿಸಿ ತಮ್ಮ ಸದಸತ್ಯ ಸಂಖ್ಯೆಯನ್ನು ಪುನರುದ್ಧರಿಸಿಕೊಳ್ಳಿರಿ.
* ತಮ್ಮ ವಿಳಾಸ ಬದಲಾದಾಗ, ಚಂದಾ ಹಣ ಪುನಃ ಕಳುಹಿಸುವಾಗ ಸಪ್ತಗಿರಿಗೆ ಇತರ ಕಾರಣಗಳಿಗಾಗಿ ಬರೆಯುವಾಗ ದಯವಿಟ್ಟು ತಮ್ಮ ಸದಸ್ಯತ್ವ ಸಂಖ್ಯೆಯನ್ನು ತಪ್ಪದೇ ತಮ್ಮ ವಿಳಾಸದೊಡನೆ ನಮೂದಿಸಿ ಬರೆಯಿರಿ.

ಸಂಪಾದಕರು :

**ಸಪ್ತಗಿರಿ**

ತಿ.ತಿ.ದೇ., ತಿರುಪತಿ.

**ಕೊಂಡು ಓದಿರಿ. ಕೊಂಡು ಓದಿಸಿರಿ.**

ಸಿದವು. ಮಂದ ಮಾರುತವು ಪರಿಮಳಗಂದದಿಂದ ಬೀಸಲು ದುಂಬಿಗಳು ಮಧುರಧ್ವನಿಗಯ್ಯಲು ಕಿನ್ನರ ಗಂದರ್ವ ಸಿದ್ಧ ಚಾರಣರು ಹಾಡಿಕುಣಿದಾಡಲು ಗಾಢಾಂದಕಾರದ ಅರ್ಧರಾತ್ರಿಯಲ್ಲಿ ಪೂರ್ವದಿಗಂತದಲ್ಲಿ ಪುಷ್ಕಲ ಚಂದ್ರನಂತೆ ದೇವತಾ ಸ್ವರೂಪಿಣಿಯಾದ ದೇವಕಿಯಲ್ಲಿ ಭಗವಂತ ಮಹಾ ಶ್ರೀವಿಷ್ಣು ಅವತಾರ ಮಾಡಿದನು. ಕಮಲ ನಯನ ಚತುರ್ಭುಜ, ಶಂಖ, ಚಕ್ರ, ಗದಾಧರನಾದ ಆ ಅದ್ಭುತ ಶಿಶುವಿನ ಸೊಬಗನ್ನು ವ್ಯಾಸರು--

ತಮದ್ಭುತಂ ಬಾಲಕಮಂಬು ಜೇಕ್ಷಣಂ
ಚತುರ್ಭುಜಂ ಶಂಖ ಗದಾರ್ಯುದಾಯುಧಂ
ಶ್ರೀವತ್ಸಲಕ್ಷ್ಮಂ ಗಲ ಶೋಭಿ ಕೌಸ್ತುಭಂ
ಪೀತಾಂಬರಂ ಸಾಂದ್ರ ಪಯೋದ ಸೌಭಗಂ
ಮಹಾರ್ಹ ವೈಢೂರ್ಯ ಕಿರೀಟ ಕುಂಡಲ
ತ್ವಿಷಾ ಪರಿಷ್ವಕ್ತ ಸಹಸ್ರ ಕುಂತಲಂ
ಉದ್ದಾಮ ಕಾಂಚ್ಯಂಗದ ಕಂಕಣಾದಿಭಿಃ
ವಿರೋಚಮಾನಂ ವಸುದೇವ ಐಕ್ಷತ
(೧೦--೧--೯--೧೦)

ಪೂತನಿಯ ಸಂಹಾರ, ಶಕಟಾಸುರ ವಧೆ, ಯಮುಳಾರ್ಜುನ ಉದ್ಧಾರ, ಅಜಗರನವಧೆ, ಕಾಳಿಯ ದಮನ, ಪ್ರಲಂಭಾಸುರ ವಧೆ, ದಾವಾಗ್ನಿ ಶಮನ ಇತ್ಯಾದಿ ಶ್ರೀಕೃಷ್ಣನ ಬಾಲಲೀಲೆಗಳಲ್ಲಿ ಈತ ಜಗನ್ನಾಥ ಶ್ರೀಮನ್ನಾರಾಯಣನೇ ಎಂಬುವ ತತ್ವ ನಮಗೆ ಗೋಚರವಾಗುತ್ತದೆ.

## ರಾಸಲೀಲೆ

ಭಾರತದ ದಶಮ ಸ್ಕಂದದಲ್ಲಿ ಕೃಷ್ಣನು ಗೋಪಿಯ ರೊಡನೆ ರಾಸಕ್ರೀಡೆಯಲ್ಲಿ ಪಾಲ್ಗೊಂಡ ಭಾಗ ಬಹು ಶೃಂಗಾರ ಕಾವ್ಯಮಯವಾಗಿದೆ. ಇಪ್ಪತ್ತೊಂಬತ್ತನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಶರತ್ಕಾಲದ ಶುಭ್ರವಾಗಿ ಅರಳಿದ ಮಲ್ಲಿಗೆ ಹೂವುಗಳಿಂದ ಕೂಡಿರುವ ರಾತ್ರಿಯಲ್ಲಿ ಸಂತೋಷಗೊಂಡು ಜಗನ್ಮೋಹಕ ಶಕ್ತಿ ರೂಪವಾದ ತನ್ನ ಯೋಗ ಮಾಯೆಯನ್ನಾಶ್ರಯಿಸಿ ಪ್ರಕೃತಿ ದೇವಿಯೊಂದಿಗೆ ರಮಿಸಲು ಸಂಕಲ್ಪಿಸಿದನು.

ಕೋಟಿ ಕೋಟಿ ನಕ್ಷತ್ರಗಳಿಂದ ಆಗಸದಲ್ಲಿ ಪೂರ್ಣಚಂದ್ರನು ವಿರಾಜಿಸಲು ತರುಲತೆಗಳು ಬಳುಕಿ ನಿಂತಿರಲು ಮಂದಮಾರುತವು ಬೀಸುತ್ತಿರಲು ಬೃಂದಾವನವೆಲ್ಲ ಚಂದ್ರನ ಕಿರಣಗಳಿಂದ ಕಂಗೊಳಿಸುತ್ತಿರಲು ಗೋಪಿಯರ ಮನ ಸೆಳೆಯುವ ರೀತಿಯಲ್ಲಿ ಮಧುರವಾದ ಕೊಳಲಿಗಾನವನ್ನು ಶ್ರೀಕೃಷ್ಣನು ನುಡಿಸಲಾರಂಬಿಸಿದನು.

ನಿಶಮ್ಯ ಗೀತಂ ತದನಂಗವರ್ಧನಂ
ವ್ರಜಸ್ತ್ರಿಯಃ ಕೃಷ್ಣಗೃಹೀತ ಮಾನಸಾಃ
ಆಜಗ್ಮುಃ ಅನ್ಯೋನ್ಯಂ ಅಲಕ್ಷಿತೋದ್ಯಮಾಃ
ಸಯತ್ರ ಕಾಂತೋ ಚಲಲೋಲ ಕುಂಡಲಾಃ

ಗೋಪಿಯರು ಮಧುರವಾದ ವೇಣುಗಾನವಂ ಕೇಳಿ ಅವನ ಕಡೆ ಆಕರ್ಷಿತವಾದ ಮನಸ್ಸುಳ್ಳವರಾಗಿ ಚಲಿಸುವ ಕರ್ಣಕುಂಡಲವುಳ್ಳವರಾಗಿ ತಮ್ಮ ಪ್ರಾಣಪ್ರಿಯನಾದ ಕೃಷ್ಣನು ಇರುವಕಡೆ ಅನ್ಯಸ್ತ್ರೀಯರಿಗೆ ತಿಳಿಯದೆ ಪ್ರತ್ಯೇಕವಾಗಿ ಹೊರಟರು. ಪತಿ ಪುತ್ರರನ್ನು ಬಿಟ್ಟು ಬಂದ ಸ್ತ್ರೀಯರನ್ನು ಹಿಂದಕ್ಕೆ ಹೋಗಲು ಕೃಷ್ಣನು ಎಷ್ಟು ಪ್ರೇರೇಪಿಸಿದರೂ ಒಪ್ಪದ ಗೋಪಿಯರು--

ಸ್ವಾಮಿ ನೀನು ಇಷ್ಟು ಕಠಿಣವಾಗಿ ಮಾತನಾಡಬಾರದು--

ಆದಿ ಪುರುಷಃ ದೇವಃ
ಮುಮುಕ್ಷೂನ್ ಭಜತೇ ಯಥಾ
ಸರ್ವ ವಿಷಯಾನ್ ಸಂತ್ಯಜ್ಯ
ತವಪಾದಮೂಲಂ ಭಕ್ತಾಃ
ಅಸ್ಮಾನ್ ಭಜಸ್ವ
ದುರವಗ್ರಹ ಅಸ್ಮಾನ್ ಮಾ ತ್ಯಜ"

ಆದಿ ಪುರುಷನಾದ ನಿನ್ನ ಪಾದವನ್ನೇ ನಂಬಿ ಎಲ್ಲ ಸುಖ ಭೋಗಗಳನ್ನು ತೊರೆದು ಬಂದಿರುವ ನಮ್ಮನ್ನು ನೀನು ಸ್ವೀಕರಿಸಬೇಕು. ಸರ್ವ ಸ್ವತಂತ್ರನಾದ ಪ್ರಭು. ನಮ್ಮನ್ನು ಕೈಬಿಡಬೇಡ. ಎಂಬುವುದಾಗಿ ಪ್ರಾರ್ಥಿಸಿಕೊಂಡರು. ಪತಿ ಪುತ್ರರು ಹೆಂಗಸರಿಗೆ ಅನುಸರಿಸ ಬೇಕಾದ ಧರ್ಮವಾದರೂ ಸಮಸ್ತ ಜೀವಕೋಟಿಗಳ ಅಂತರಾತ್ಮನಾಗಿರುವ ಶ್ರೀಮನ್ನಾರಾಯಣನನ್ನು ಕೂಡುವುದರಲ್ಲಿ ದೋಷವಿಲ್ಲವೆಂದು ಗೋಪಿಯರ ಮತ. ಕೃಷ್ಣನ ವೇಣುಗಾಸದಿಂದ ಮೋಹಿತಳಾದ ಗೋಪಿ "ಸ್ವಾಮಿ ಪಶು ಪಕ್ಷಿ ಮೃಗ ಖಗಗಳೂ ವೇಣುಗಾನದಿಂದ ಪುಳಕಿತವಾದಾಗ ನನ್ನಂತಹ ಹೆಣ್ಣು ತ್ರಿಲೋಕ ಸುಂದರನಾದ ನಿನ್ನ ಲಾವಣ್ಯ ದಿವ್ಯ ಸೌಂದರ್ಯ ಸೊಬಗನ್ನು ಕಂಡು ಮೋಹಿತಳಾಗುವುದರಲ್ಲಿ ಏನು ತಪ್ಪು ಎಂಬುವುದಾಗಿ ಪ್ರಾರ್ಥಿಸಿಕೊಂಡಾಗ ಉದಾರ ಚರಿತನಾದ ಶ್ರೀಕೃಷ್ಣ ಗೋಪಿಯರೊಂದಿಗೆ ವಿಹಾರ ಮಾಡಿದನು. ಗುಂಪಾಗಿ ಕೂಡಿರುವ ಗೋಪಿಯರ ಮಧ್ಯೆ ಸರಳವಾದ ನಗೆಯಿಂದ ಅವರಿಂದ ಹೊಗಳಿಸಿ ಕೊಳ್ಳುತ್ತಾ ವೈಜಯಂತೀಮಾಲೆಯನ್ನು ಧರಿಸಿ ತಂಪಾದ ಯಮುನಾ ನದಿಯ ತಟದ ಮೇಲೆ ಚಲಿಸುವ ಅಲೆಗಳನ್ನು ವೀಕ್ಷಿಸುತ್ತಾ ರಾಸಲೀಲೆಯನ್ನಾಡಿದನು. ಯೋಗೀಶ್ವರನಾದ ಶ್ರೀಕೃಷ್ಣನು ಮಂಡಲಾಕಾರವಾಗಿ ನಿಂತ ಗೋಪಿಯರನ್ನು ಒಬ್ಬೊಬ್ಬಳನ್ನಾಗಿ ತೋಳುಗಳಿಂದ ಕಂಠಾಲಿಂಗನ ಮಾಡಿಕೊಳ್ಳಲ್ಪಟ್ಟವನಾಗಿ ರಾಸಕ್ರೀಡೆಯಲ್ಲಿ ಉದ್ಯುಕ್ತನಾದನು.

ವಲಯಾನಾಂ ನೂಪುರಾಣಾಂ
ಕಿಂಕಿಣೀನಾಂ ಚ ಯೋಷಿತಾಂ
ಸ ಪ್ರಿಯಾಣಾಂ ಅಭೂತ್
ಶಬ್ದಸ್ತುಮುಲೋ ರಾಸಮಂಡಲೆ

ಆ ರಾಸಮಂಡಲದಲ್ಲಿ ಹಲವು ಕೃಷ್ಣರೊಂದಿಗೆ ಕೂಡಿದ ಗೋಪಿಯರ ಕಡಗ, ಕಾಲುಗಳ ಗೆಜ್ಜೆ ಮನೋಹರವಾದ ತುಮುಲ ಶಬ್ದವನ್ನು ಮಾಡುತ್ತಿರಲು, ಗೋಪಿಯರ ಗಾನದಿಂದ ನರ್ತನಕ್ಕೆ ಇಂಪಾದ ಸ್ವರ. ಅವರ ಭಗವತ್ಪ್ರೇಮ ನಭೋಮಂಡಲಕ್ಕೆ ಶೋಭಾಯಮಾನವಾಗಿ ಕಂಡಿತು. ಒಬ್ಬ ಗೋಪಿ ಕೃಷ್ಣನ ತೋಳನ್ನು ಆಘ್ರಾಣಿಸಿ ರೋಮಾಂಚನದಿಂದ ಮುತ್ತಿಟ್ಟಳು. ಮತ್ತೊಬ್ಬಳು ಶ್ರೀಕೃಷ್ಣನ ಮಂಗಳಕರವಾದ ಕರಕಮಲಗಳನ್ನು ತನ್ನ ವಕ್ಷಸ್ಥಳದಲ್ಲಿ ತೆಗೆದು ಇರಿಸಿಕೊಂಡಳು. ಶ್ರೀಕೃಷ್ಣನ ಈ ದಿವ್ಯ ಲೀಲೆಗಳನ್ನು ನೋಡಲು ಆಗಸದಲ್ಲಿ ದೇವತಾಸ್ತ್ರೀಯರೂ ಕೂಡ ಮೋಹಿತರಾಗಿ ನಿಂತರು. ಕೃಷ್ಣನು ಕಾಣದಿರಲು ಅವರ ವಿರಹ, ದುಃಖ, ಅವರ ಆಲಾಪಣೆ, ಪ್ರಾರ್ಥನೆ, ಮೊರೆ, ಅವರ ಯುಗಳಗೀತೆ, ಗೋಪಿಕಾಗೀತೆ, ಸಾಹಿತ್ಯ ಕ್ಷೇತ್ರದಲ್ಲಿ ಶೃಂಗಾರ ರಸಕ್ಕೆ ವ್ಯಾಸರು ಕೊಟ್ಟ ಅನುಪಮ ಕೊಡುಗೆ ಅನರ್ಘ್ಯ ರತ್ನಗಳು. ಶ್ರೀ ಶುಕಮಹರ್ಷಿಗಳು--

ಏವಂ ವ್ರಜಸ್ತ್ರಿಯೋರಾಜನ್
ಕೃಷ್ಣಲೀಲಾನುಗಾಯತೀಃ
ರೇಮಿರೇಽಹಸ್ಸು ತಚ್ಚಿತ್ತಾಃ
ತನ್ಮನಸ್ಕಾಃ ಮಹೋದಯಾಃ

ಗೋಪಿಯರು ಶ್ರೀಕೃಷ್ಣ ದಿವ್ಯಲೀಲೆಗಳನ್ನು ಗಾನ ಮಾಡುತ್ತ ಆತನನ್ನೇ ಮನಸ್ಸಿನಲ್ಲಿ ಚಿಂತಿಸುತ್ತ, ಆತನನ್ನೇ ಭಾವಿಸುತ್ತ ಮಹೋತ್ಸವ ರೂಪವಾಗಿ ಹಗಲೆಲ್ಲ ರಮಿಸುತ್ತಾ ಕಳೆಯುತ್ತಿದ್ದರು. ಶ್ರೀಮದ್ ಭಾಗವತ ಒಂದು ಶ್ಲೋಕಗಳ ಸಾಗರ ಸಂಗಮ. ಆ ಸ್ತೋತ್ರಜಾಲದಲ್ಲಿ ನಿರ್ಹೇತುಕ ಭಕ್ತಿ ನಮ್ಮನ್ನು ಪರಮಾತ್ಮನ ಕಡೆ ಕೊಂಡೊಯ್ಯುತ್ತದೆ.

ಮೊದಲನೆಯ ಸ್ಕಂದದಲ್ಲಿ ಬರುವ ಕುಂತೀ ಮಾಡುವ ಸ್ತೋತ್ರ

ಕೃಷ್ಣಾಯ ವಾಸುದೇವಾಯ
ದೇವಕೀ ನಂದನಾಯ ಚ
ನಂದಗೋಪ ಕುಮಾರಾಯ
ಗೋವಿಂದಾಯ ನಮೋ ನಮಃ
ನಮಃ ಪಂಕಜನಾಭಾಯ
ನಮಃ ಪಂಕಜಮಾಲಿನೇ
ನಮಃ ಪಂಕಜನೇತ್ರಾಯ
ನಮಸ್ತೇ ಪಂಕಜಾಂಘ್ರಯೇ

ಭೀಷ್ಮರು ಮಾಡುವ "ಸ ದೇವದೇವೋ" ಎಂಬುವ ಸ್ತೋತ್ರ ಶ್ರೀ ಶುಕರು ಮಾಡುವ "ನಮಃ ಪರಸ್ಮೈ ಪುರುಷಾಯ ಭೂಯಸೇ" ಎಂಬುವ ಸುಂದರ ಸ್ತೋತ್ರ. "ಜಿತಂ, ಜಿತಂತೇ, ಜಿತ ಯಜ್ಞಭಾವನ" ಎಂಬುವ ವರಾಹಾವತಾರ ಸ್ತೋತ್ರ. "ಯೋಽತಃ ಪ್ರವಿಶ್ಯ ಮಮ ವಾಚಮಿಮಾಂ ಪ್ರಸುಪ್ತಾಂ" ಎಂಬುವ ಭಕ್ತ ಧ್ರುವರ ಸ್ತೋತ್ರ. ನಾರಾಯಣ ಕವಚ. ಬ್ರಹ್ಮಕೃತ ಶ್ರೀ ಕೃಷ್ಣಸ್ತೋತ್ರ. ವಿಷ್ಣು ಸುದರ್ಶನ ಚಕ್ರ ಸ್ತೋತ್ರ ಅಂಬರೀಷರಿಂದ ಹತ್ತನೆಯ ಸ್ಕಂದದಲ್ಲಿ ದೇವತೆಗಳು ಕೃಷ್ಣನನ್ನು ಕುರಿತು ಮಾಡುವ ಪ್ರಾರ್ಥನಾ ಶ್ಲೋಕಗಳು -- ಇನ್ನೂ ನೂರಾರು ಶ್ಲೋಕಗಳ ಮಹಾ ಸಾಗರ ಭಾಗವತ. ಇಲ್ಲಿ ಸ್ನಾನಮಾಡುವರಿಗೆ ಮುಕ್ತಿ ನಿಶ್ಚಿತ.



# ಗಜೇಂದ್ರ ಮೋಕ್ಷ

ಭಾರತೀಯ ಸಾಹಿತ್ಯದಲ್ಲಿ ಭಾಗವತ ಗ್ರಂಥ ಕ್ಕೊಂದು ವಿಶಿಷ್ಟ ಗೌರವವಿದೆ -- ಭಕ್ತಿ ಕ್ಷೇತ್ರದಲ್ಲಿ ಅದು ವಿಶೇಷ ಸಂದೇಶ ನೀಡುವುದರಿಂದ. ಭಕ್ತಿ ಎಂದರೇನು? ಅವ್ಯಕ್ತ ಶಕ್ತಿಯ ಬಗ್ಗೆ ತಾಳುವ ಅಗಾಧ ಶ್ರದ್ಧೆ. ಅದೊಂದು ಮಧುರ ಅನುಭವ. ಅವ್ಯಾಜ ಕರುಣಾಮೂರ್ತಿಯಾದ ಭಗವಂತನ ಕೃಪೆಯನ್ನು ಕರಗಿಸಿ ನಮ್ಮತ್ತ ಸೆಳೆದುಕೊಳ್ಳುವ -- ಅಥವ ಪ್ರವ ಹಿಸಿ ಬರಲೆಂದು ದೇಡುವ ರಸಾರ್ದ್ರಭಾವ -- ಅದ್ಭು ತಶಕ್ತಿ; ಅಭೀಪ್ಸಾಮಿಶ್ರಿತ ಅನಿರ್ವಚನೀಯ ಕೃತಜ್ಞ ತಾಭಾವ.

ಭಾರತದ ಎಲ್ಲ ಭಾಷೆಗಳಲ್ಲೂ ಭಾಗವತ ಗ್ರಂಥ ಉಪಲಬ್ಧವಿದೆ. ಈ ಗ್ರಂಥದಲ್ಲಿ ವರ್ಣಿತವಾಗಿ ರುವ ಪ್ರತಿ ಸನ್ನಿವೇಶವೂ ಪಾಠಕರ ಬಾಳಿಗೊಂದು ನೂತನ ಚೈತನ್ಯ. -- ನಂಬಿಕೆ -- ಧೈರ್ಯ ನೀಡು ತ್ತದೆ. ಕಾವ್ಯಾಂಗಗಳಾದ ಉತ್ಪ್ರೇಕ್ಷೆ-- ಅತಿಶಯೋಕ್ತಿ ಗಳು ಈ ಗ್ರಂಥದಲ್ಲಿರಬಹುದು. ಆದರೆ ಅದಕ್ಕೂ ಹೆಚ್ಚಾಗಿ ಶಾಂತಿ ಸಂದೇಶವಿದೆ. ಓದುಗರ ಚಿತ್ತವನ್ನು ದ್ರವೀಕರಿಸುವ ಸಾಮರ್ಥ್ಯವಿದೆ-- ಪಾಠಕ ಚಿತ್ತದ್ರವೀ ಕರಣ ಸಾಮರ್ಥ್ಯವೇ ಕವಿ ಪ್ರತಿಭೆಗೆ ಬರೆಗಲ್ಲು.

ಭಾಗವತ ಬರೆದ ಭಗವಾನ್ ವೇದವ್ಯಾಸರನ್ನು ಭಾರತೀಯರು ಕೇವಲ--ಕವಿ-- ಎಂದು ಭಾವಿಸು ವುದಿಲ್ಲ. ಅವರನ್ನು ಪರಮಪೂಜ್ಯ, ಸತ್ಯದರ್ಶಿ, ಮಹರ್ಷಿ ಎಂದು ಗೌರವಿಸುತ್ತಾರೆ. ಅವರ ಲೇಖ ನಿಯಿಂದ ಬಂದ, ಅನೂಹ್ಯ ವಿಪುಲ ಸಾಗರೋಪಮ ಸಾಹಿತ್ಯ -- ಜ್ಞಾನದೀವಿಗೆಯಾಗಿದೆ. ಸಂಸ್ಕೃತಭಾ ಷೆಯ ಹೈಮಾಚಲೋಪಮ ವಾಙ್ಮಯದಲ್ಲಿ ಈ ಋಷಿಕವಿಗೆ ಅಗ್ರತಾಂಬೂಲ.

ಭಾರತದೇಶ ವಿವಿಧ ಭಾಷೆಗಳ ದೇಶ -- ವಿವಿಧ ಸಂಸ್ಕೃತಿಗಳ ದೇಶ. ಆದ್ದರಿಂದ ಬೇರೆ ಬೇರೆ ಮಹಾ ಕವಿಗಳು ತಂತಮ್ಮ ಭಾಷೆಯಲ್ಲಿ ಭಾಗವತಗ್ರಂಥ ವನ್ನು ರಚಿಸಿದ್ದಾರೆ. ಗಂಗಾನದಿಯೊಂದು. ಅದ ರಿಂದ ಕಾಲುವೆಗಳಲ್ಲಿ ಹರಿದು ಬಂದ ನೀರು ಸಾವಿ ರಾರು ಕಡೆ. ಸಂಸ್ಕೃತ ಸಾಹಿತ್ಯ ದಿವಿಜನದಿ ಗಂಗೆ. ಅನ್ಯಭಾಷೆಗಳ ಸಾಹಿತ್ಯವೆಲ್ಲ ಕಾಲುವೆಗಳು. ಪ್ರಾದೇ ಶಿಕ ಭಾಷಾಕವಿಗಳು-- ಸಂಸ್ಕೃತವ ಉತ್ತಮೋ ತ್ತಮ ಗ್ರಂಥಗಳನ್ನು ತಂತಮ್ಮ ಭಾಷೆಗೆ ತರುವಾಗ -- ತಮ್ಮದೇ ಆದ ವಿಶೇಷ ಪ್ರತಿಭೆಯನ್ನು -- ಸೊಗಸು -- ಸ್ವಾರಸ್ಯ -- ಸೊಗಡುಗಳನ್ನು ತೋರಿಸಿದ್ದಾರೆ. ಇದು ಸಹಜ ಹಾಗೂ ವಾಂಛನೀಯ.

ಗಜೇನ್ದ್ರಮೋಕ್ಷ -- ಎಂಬ ಭಾಗ ಭಾಗವತದ ಸಾರಭೂತ ಅಂಶಗಳಲ್ಲೊಂದು. ಶಾಪಗ್ರಸ್ತರಾಜ ಇಂದ್ರದ್ಯುಮ್ನ -- ಆನೆಯಾಗಿ ಜನ್ಮಪಡೆದ. ಈ ಗಜರಾಜನನ್ನು ಮೊಸಳೆಯೊಂದು ಹಿಡಿಯಿತು. ಈ ಎರಡು ಪ್ರಾಣಿಗಳಿಗೂ ಭಾರೀ ಹೋರಾಟ ವಾಯ್ತು. ಗಜರಾಜ ಭಗವಂತನಿಗೆ ಮೊರೆಯಿಟ್ಟ -- ಶ್ರೀಹರಿ ಕರುಣೆಯಿಂದ ಗಜರಾಜನನ್ನು ಕಾಪಾ ಡಿದ -- ಮೊಸಳೆಯನ್ನು ತುಂಡರಿಸಿದ. ಇಷ್ಟು ಕಥಾ ವಸ್ತು. ಇದನ್ನು ಸೋದರ ಭಾಷೆಯ ಒಬ್ಬ ಕವೀಶ್ವರ ಅದೆಷ್ಟು ರಮಣೀಯವಾಗಿ -- ಅದೆಷ್ಟು ವಿಸ್ತಾರ ವಾಗಿ ಹಿಗ್ಗಿಸಿ ಬರೆದಿದ್ದಾನೆ!! ಆತನ -- ದರ್ಶನ-- ಅದೆಷ್ಟು ಭವ್ಯ!! ಭಗವಾನ್ ವ್ಯಾಸರ ಕೃಪೆಯಿಂದ ಈ ಕವಿ ಅದೆಷ್ಟು ಎತ್ತರ -- ಬಿತ್ತರಗಳನ್ನು ಕಂಡಿ ದ್ದಾನೆ!!

ಪರಮ ಸಾತ್ವಿಕ ಚೇತನ -- ಕವಿ ಪೋತನ; ಆಂಧ್ರ ವಾಙ್ಮಯದ ಅನರ್ಘ್ಯ ಮೌಳಿಮಣಿ ಈ ಕವಿಪುಂ ಗವ. ಸಂಸ್ಕೃತ ಭಾಗವತ ಮೂಲಗ್ರಂಥ, ನಿಜ. ಅದನ್ನು ಬಿಟ್ಟರೆ ದ್ವಿತೀಯಸ್ಥಾನ ಈ ಕವೀಶ್ವರ ಬರೆದ -- ಆಂಧ್ರಭಾಗವತಕ್ಕೆ ಮೀಸಲು -- ಎಂದು ಹಿರಿ ಯರ ಅಭಿಪ್ರಾಯವಿದೆ. ಈ ಅಗ್ಗಳಿಕೆಗೆ ಪಾತ್ರನಾದ ಪೋತನ ಗಜೇಂದ್ರನ ಈ ಪ್ರಸಂಗಕ್ಕೆ ರಂಗೇರಿಸಿ ದ್ದಾನೆ -- ಮಾತು ಮಾತಿನಲ್ಲಿ ಮಾಧುರ್ಯ ತುಂಬಿ ದ್ದಾನೆ; ತನ್ನ ಲೇಖನಿಯನ್ನು ಭಕ್ತಿ ರಸದಲ್ಲಿ ಅದ್ದಿ ಬರೆ ದಿದ್ದಾನೆ.

ಈ ಸಲಗ, ಈ ಗಜೇಂದ್ರ, ಸಾವಿರಾರು ಆನ ಗಳ ಸರದಾರ, ತ್ರಿಕೂಟಾಚಲ ಕಾನನ ಪ್ರಾಂತದಲ್ಲಿ ಸ್ವಚ್ಛಂದವಾಗಿ ವಿಹರಿಸುತ್ತ ಈ ಗಜರಾಜ ಸಂಚರಿ ಸುವ ದೆಟ್ಟ. ಅವನ ಶಕ್ತಿಗೆದುರಿಲ್ಲ. ಅವನ ಸಾಹಸ ಪರಾಕ್ರಮಗಳಿಗೆ ಸರಿಸಾಟಿ ಇಲ್ಲ. ತನ್ನ ಗುಂಪು ಕಂಡು ಅವನು ಬೀಗಿ ಮೆರೆದ. ಇನ್ನಾರಿಗುಂಟು ಈ ಗೌರವ -- ಸೌಭಾಗ್ಯವೆಂದು ಹೆಮ್ಮೆಪಟ್ಟ -- ಈ ಹೆಮ್ಮೆ -- ಅಹಂಕಾರದ ರೂಪು ಪಡೆಯಲು ಹೆಚ್ಚು ಕಾಲಾವಕಾಶ ಬೇಕಿಲ್ಲ.

ದೂರದಲ್ಲೊಂದು ಸರೋವರ. ನವಫುಲ್ಲಾಂ ಭೋಜಕಲ್ಹಾರಭೂಷಿತವಾಗಿದೆ. ರಸಾಲ ಸಾಲ ಹಿಂತಾಲ ವೃಕ್ಷಗಳು ಆ ಸರೋವರ ಲಕ್ಷ್ಮಿಯ ಮೇಖ ಲೆಯಂತೆ ಸುತ್ತುವರಿದಿವೆ. ತುಂಬಿ ತುಳುಕುವ ಈ ಸರೋವರ ಗಜೇಂದ್ರನನ್ನು -- ಏಕೋ -- ಏನೋ -- ಆಕರ್ಷಿಸಿತು. ತನ್ನ ಪಂಚೇಂದ್ರಿಯಗಳಿಗೂ, ಶಬ್ದಸ್ಪರ್ಶ ರೂಪರಸಗಂಧಗಳನ್ನು ಒದಗಿಸಿ ತೃಪ್ತಿ ಪಡಿಸುವ ಆಕರ್ಷಣೆಯನ್ನು ಆ ಸರೋವರದಲ್ಲಿ ಕಂಡ. ತನ್ನ ಗುಂಪನ್ನು ಹಿಂದೆ ಬಿಟ್ಟು ತಾನೊಬ್ಬನೇ ಸರೋವರಕ್ಕೆ ಬಂದ -- ಮನಬಂದಂತೆ ಈಜಾಡಿದ -- ಸೊಂಡಿಲಲ್ಲಿ ನೀರು ತುಂಬಿಕೊಂಡು ಗಗನಕ್ಕೆ ಚಿಮ್ಮಿಸಿದ -- ಸುತ್ತಲೂ ಎರಚಿದ -- ಶಾಂತವಾ ಗಿದ್ದ ಜಲಾಶಯ ಅಲ್ಲಕಲ್ಲೋಲವಾಯ್ತು. ಬೆಳೆದಿದ್ದ ಕಮಲಗಳನ್ನು ಕಿತ್ತೆಸೆದ. ಹರಿದಾಡುತ್ತಿದ್ದ ಮೀನು ಗಳು ಗಾಬರಿ ಪಟ್ಟವು. ಸಾರಸಾದಿ ಪಕ್ಷಿಗಳು ಹಾರಿ ಹೋಗಿ ಸುತ್ತಲ ಮರಗಳ ಮೇಲೆ ಆಶ್ರಯ ಪಡೆ ದವು. ಮದ್ದಾನೆಯ ಸ್ವೈರ ವಿಹಾರಕ್ಕೆ ಅಡ್ಡಿಯೇನು? ಅಂಕೆಯೇನು? ಸ್ವಚ್ಛಂದ ಜಲಕೇಳಿ ಸ್ವಲ್ಪ ಕಾಲ ನಡೆ ಯಿತು.

ಯಾರು ನನ್ನ ರಾಜ್ಯಕ್ಕೆ ಲಗ್ಗೆ ಇಟ್ಟವರು -- ಎಂಬಂತೆ -- ಅಲ್ಲಿದ್ದ ಮೊಸಳೆಯೊಂದು ಗಜ ರಾಜನ ಕಾಲು ಹಿಡಿಯಿತು -- ಕಾಲು ಹಿಡಿದದ್ದು ಭಕ್ತಿಯಿಂದಲ್ಲ -- ರೋಷದಿಂದ -- ಅಸಮಾಧಾ ನದಿಂದ -- ಕ್ಷಾತ್ರದಿಂದ. ಭೂಮಿಯ ಮೇಲೆ ಆನೆ ಗೆಷ್ಟು ಬಲ, ನೀರಿನಲ್ಲಿ ಮೊಸಳೆಗಷ್ಟು ಬಲ -- ಸ್ವಸ್ಥಾನದಲ್ಲಿ ಸಾಮರ್ಥ್ಯ ಹೆಚ್ಚು!! ಆನೆ ತನ್ನ ಶಕ್ತಿ ಯನ್ನೆಲ್ಲ ಉಪಯೋಗಿಸುತ್ತಿದೆ ಕಾಲು ಬಿಡಿಸಿಕೊ ಳ್ಳಲು -- ಮೊಸಳೆ ತನ್ನ ಶಕ್ತಿಯನ್ನೆಲ್ಲ ಉಪಯೋ ಗಿಸಿ ಆನೆಯನ್ನು ಜಗ್ಗುತ್ತಿದೆ. ಇದು ಅದ್ಭುತ ಶಕ್ತಿ ಗಳ ಪೈಪೋಟಿ. ಭೀಮ ಶಕ್ತಿಗಳ ಹೋರಾಟ. ನೆರ ವಿಗೆಂದು ಗಜೇಂದ್ರ ತನ್ನ ಗುಂಪಿನ ಆನೆಗಳನ್ನು ಘೀಳಿಟ್ಟು ಕರೆದ. ಯಾರೆಷ್ಟು ಪ್ರಯತ್ನ ಮಾಡಿದರೂ ಎಲ್ಲ ವ್ಯರ್ಥವಾಯ್ತು. ಕ್ಷಣ ಕ್ಷಣಕ್ಕೆ ಮೊಸಳೆಯ ಹಿಡಿತ ಜೋರಾಯ್ತು. ಇಭರಾಜನ ಶಕ್ತಿ ಕುಂದುತ್ತ ಬಂತು.

---ವಿದ್ವಾನ್ ಬ. ನ. ಗುಂಡೂರಾವ್.

ಇಲ್ಲಿ ಕವಿಯದೃಷ್ಟಿಯಲ್ಲಿ ಕಥಾವಸ್ತು ಗೌಣ ಯ್ತು. ಜಗತ್ತಿನ ಆಕರ್ಷಣೆಗೆ ಬಲಿಯಾಗಿ ಹೀಣ ಬಿಡಿಸಿಕೊಳ್ಳಲಾರದ ಇಕ್ಕಟ್ಟಿಗೆ ಸಿಕ್ಕಿದ ಾನವನ ದಯನೀಯ ಪರಿಸ್ಥಿತಿ ಬಲವಾಗಿ ನೆನ ೆ ಬಂದಿರಬೇಕು. ಭಕ್ತಿ ತತ್ತ್ವ ನಿರೂಪಣೆಗೆ ಕವಿ ಈ ್ವೇಶವನ್ನು ಬಳಸಿಕೊಂಡಿದ್ದಾನೆ. ಜೀವವು ತೀವ್ರ ು ಚಿಂತೆಗೊಳಪಟ್ಟಾಗ ಒಂದು ಬಗೆಯ ಚಿಂತನೆ ತತ್ವಜಿಜ್ಞಾಸೆ ಪ್ರಾರಂಭವಾಗುತ್ತದೆ. ಗಜೇಂದ್ರನ ಳಿನಲ್ಲಿ ಬಂದದ್ದೂ ಸಹ ಇದೇ ಚಿನ್ತನೆ.

ಸೃಷ್ಟಿ ಸ್ಥಿತಿ ಲಯ ಕರ್ತನಾದ ಭಗವಂತನನ್ನು ರ್ಥಿಸಿದ. ತ್ರಿಕಾಲಾಬಾಧಿತವಾದ ಸತ್ಯೆ ಸ್ವರೂ ವನ್ನೇ ತಾನೆ ಭಗವಂತನೆನ್ನುವುದು? ಕಾಣದ ಸೊಂದು ನಮ್ಮನ್ನು ಕಾಪಾಡಲು ಸದಾ ಸಿದ್ಧವಾ ನೆ --ಎಂಬ ನಂಬಿಕೆ ಮಾನವನ ಕೈಹಿಡಿದು ತೆಸುವ ತತ್ವವಾಗಿದೆ. ಭಗವಂತ, ಕರುಣಾಸ್ವ ಪಿ; ಅಖಿಲೇಂದ್ರಿಯಾಧ್ಯಕ್ಷ, ಕ್ಷೇತ್ರಜ್ಞ -- ದಯಾ ಸೋಧಿ -- ವಿಜ್ಞಾನಮಯ -- ನಿಖಿಲಕಾರಣ ಸರ್ವಾಗಮಾಮ್ನಾಯ ಜಲಧಿ--ರೂಪಕರ್ಮ ವ ವಿವರ್ಜಿತ -- ಅನಂತ ಶಕ್ತಿ ಪರಿವೃತ -- ನಾತನ. ಇಂತಹ ಪರಾತ್ಪರನಿಗೆ ಗಜೇಂದ್ರ ಶರ ಗಿ ಪ್ರಾರ್ಥನೆ ಸಲ್ಲಿಸಿದ. ಕರುಣೆಯಿಂದ ಕಾಪಾ ದೇಕೆಂದು ಬೇಡಿದ. ಒಂದು ಹಂತದಲ್ಲಿ ಭಗ ತನೆಂಬಾತನಿದ್ದಾನೆಯೆ? --ಎಂಬ ಸಂದೇಹವೂ ುತು. ಮತ್ತೆ ತೆರೆಸರಿದು ಅನುಮಾನ ಪರಿಹಾ ವೂ ಆಯ್ತು.

ಈಗ ಭೀಮಬಲನಾದ ಗಜರಾಜ ಏನಾಗಿ ನೆ? ಸಂಚರಿಸುವ ಪರ್ವತದಂತಿದ್ದ ಗಜೇಂದ್ರ ನಾಗಿದ್ದಾನೆ? ಸಾವಿರಾರು ಆನೆಗಳಗುಂಪಿಗೆ ಒಡೆ ನೇನಾಗಿದ್ದಾನೆ? ನನ್ನ ಸಮಾನರಿಲ್ಲವೆಂದು ಮೆರೆ ಡಿದ ಕರಿಣೀನಾಥ ಏನಾದ? ಬಂಡೆ ಗುಂಡು ಳನ್ನು ಸೊಂಡಿಲಲ್ಲಿ ಹಿಡಿದು ಚೆಂಡಿನಂತೆಸೆಯು ದ್ದ ಅದ್ಭುತ ಪರಾಕ್ರಮಿ ಏನಾಗಿದ್ದಾನೆ? ಮೊಸಳೆ ುಂದ ಬಿಡಿಸಿಕೊಳ್ಳಲಾಗದೆ ಕುಸಿಯುತ್ತಿದ್ದಾನೆ.

ಇಲ್ಲಿ ಕವಿ ಪ್ರತಿಭೆ ಮಿಂಚಿನಂತೆ ಹೊಳೆದಿದೆ. ಜೇಂದ್ರನ ಆರ್ತನಾದ ವೈಕುಂಠ ನಿಲಯನಿಗೆ ುಟ್ಟಿತು -- ಎಂದು ಶುಷ್ಕವಾದ ಬಂದು ಮಾತು ರೆಯಲು ಪೋತನ ಸಾಮಾನ್ಯಮನುಷ್ಯನೇನು? ತ ಪುಂಭಾವ ಶಾರದೆ. ಸರಸ್ವತೀ ವರಪುತ್ರ -- ಾಗ್ವಿಲಾಸ ಚತುರಮತಿ -- ಮೃದುಮಧುರ ಧ್ವನಿ ರ್ಣ ಶಬ್ದ ಪ್ರಯೋಗ ಪರಿಣತಮತಿ.

ಸುಂದರಾಕೃತಿಯೂ ಇಂದಿರಾಪತಿಯೂ ಆದ ಮನ್ನಾರಾಯಣ "ಮಂದಾರವನಾಂತರಾಮೃತ ರಃ ಪ್ರಾಂತೇಂದು ಕಾಂತೋಪಲೋತ್ಪಲ ರ್ಯಂಕ"ದಲ್ಲಿ ರಮಾದೇವಿಯೊಡನೆ ಸರಸಲ್ಲಾಪ ಮಗ್ನ ಮಾನಸನಾಗಿರುವಾಗ -- ಗಜೇಂದ್ರನ ಆರ್ತ ನಾದ -- ಗೋಳು -- ಕೇಳಿಸಿತು. ಭಕ್ತಾನುಕಂಪಾ ನಿಧಿಯಾದ ಶ್ರೀಹರಿಗೆ ಸಿರಿಯರಸಿ ಲಕ್ಷ್ಮಿ ಗೌಣವಾ ದಳು. ಇಭರಾಜನ ಗೋಳು ಪ್ರಧಾನವಾಯ್ತು. ತಕ್ಷಣ ಹೊರಟ. ಲಕ್ಷ್ಮೀದೇವಿಗೆ ಹೇಳಲಿಲ್ಲ -- ಶಂಖ ಚಕ್ರ -- ಗದೆ ಮುಂತಾದ ಆಯುಧಗಳನ್ನು -- ಅಣಿ ಮಾಡಿಕೊಳ್ಳಲಿಲ್ಲ -- ಪರಿವಾರ ದೇವತೆಗಳಾರನ್ನೂ ಕರೆಯಲಿಲ್ಲ -- ಯಾವ ಸಿಬ್ಬಂದಿಯನ್ನೂ ತೆಗೆದು ಕೊಳ್ಳಲಿಲ್ಲ -- ಕೆದರಿ ಹೋಗಿದ್ದ ತನ್ನ ತಲೆಗೂದ ಲನ್ನೂ ಸರಿಪಡಿಸಿಕೊಳ್ಳಲಿಲ್ಲ -- ಹರಿಗೂ ಸಿರಿ ದೇವಿಗೂ ಲೆತ್ತದಾಟದಲ್ಲಿ ಯಾವುದೋ ವಿವಾದ ಬಂದು -- ಬಹುಶಃ ಆಕೆ ಆಟ ಬೇಡವೆಂದಿರ ಬೇಕು. ಶ್ರೀಹರಿ ಆಕೆಯನ್ನು ಕಡ್ಡಾಯವಾಗಿ ಕೂಡಿ ಸಲು ಆಕೆಯ ಸೆರಗು ಹಿಡಿದು ಜಗ್ಗಿದ್ದನೇನೋ -- ಆ ಸೆರಗು ಆತನ ಕೈಲಿದೆ -- ಹಾಗೆ ಹೊರಟು ಬಿಟ್ಟಿ ದ್ದಾನೆ. ಸೆರಗಿರುವುದನ್ನು ಸಹ ಕರುಣಾಮೂರ್ತಿ ಹರಿ ಮರೆತು ಹೋದನೋ - - ವಾಹನವಾದ ಗರುಡ ನನ್ನೂ ಕರೆಸಲಿಲ್ಲ -- ಯಾವ ಪೂರ್ವಸಿದ್ಧತೆಯೂ ಇಲ್ಲ -- ಹೊರಟದ್ದಷ್ಟೆ!! ಹರಿಯ ಹಿಂದೆ ಸಿರಿದೇವಿ ಹೊರಟಳು -- ಆಕೆ ಹೊರಡಲೇಬೇಕಾಗಿತ್ತು -- ಆಕೆಯ ಸೆರಗು ಆತನಕೈಲಿದೆ -- ಆಕೆಯ ಹಿಂದೆ ಸೇವಕ ಗಣ -- ಅವರ ಹಿಂದೆ ಗರುಡ -- ಶಂಖ ಚಕ್ರ ಕೌಮೋದಕಿ ಮುಂತಾದ ಆಯುಧಗಳು -- ಇದೇನು ವಿಚಿತ್ರ ಪಯಣವೆಂದು ನಾರದ ಮಹರ್ಷಿ -- ಸಮಸ್ತವೈಕುಂಠನಗರವೇ -- ದೇವತಾಸಮೂ ಹವೇ ಹೊರಟಿದೆ. ಏಕೆಂದು ಕೇಳುವ ಜನ ಯಾರು? ಎಲ್ಲಿಗೆಂದು ಹೇಳುವ ಜನ ಯಾರು? ಭೂಲೋಕದಲ್ಲಿ ಯಾರಿಗೇನು ವಿಪತ್ತು ಬಂತು? ಯಾವ ಅನಾಥಸ್ತ್ರೀ ತನ್ನ ಮಾನಪ್ರಾಣ ರಕ್ಷಣೆಗಾಗಿ ಕೂಗುತ್ತಿದ್ದಾಳೆ? ಖಳರು ವೇದಗಳನ್ನಪಹರಿಸಿ ಕೊಂಡು ಹೋದರೋ? ಎಲ್ಲಿದ್ದಾನೆ ಭಗವಂತ -- ತೋರಿಸೆಂದು ಯಾವ ಧೂರ್ತ ಭಕ್ತ ಜನರಿಗೆ ಸಲಾಲೆಸೆದಿದ್ದಾನೋ? ಮಂದಗಮನೆಯಾದ ಲಕ್ಷ್ಮಿ ದೇವಿ ಶ್ರೀಹರಿಯ ವೇಗಕ್ಕೆ ಪಕ್ಕಂತೆ ಹೆಜ್ಜೆಹಾಕಲು ಸಾಧ್ಯವೇ? ಹೋಗದೇ ವಿಧಿ ಇಲ್ಲ -- ಆಕೆಯ ಸೆರಗು ಹರಿಯ ಕೈಲಿದೆ. ಸಮಸ್ತ ದೇವತಾ ಸಮೂಹ ಆಶ್ಚರ್ಯಚಕಿತವಾಗಿದೆ -- ನಮೋನಾರಾಯಣ -- ಎನ್ನುತ್ತಿದ್ದಾರೆ -- ಇಂದ್ರಾದಿ ದೇವತೆಗಳು. ಇದೇನು ಆತುರ -- ಇದೇನು ಪ್ರಯಾಣ -- ಇದೇನು ಗಡಿ ಬಿಡಿ!!

ಈ ಸಮಸ್ತ ದೇವತಾ ಸಮೂಹ ಬಂದುದೆಲ್ಲಿದೆ? ಗಜರಾಜ ಕಾಲು ಬಿಡಿಸಿಕೊಳ್ಳಲಾರದೆ ಗೋಳಾಡು ತ್ತಿದ್ದ ತ್ರಿಕೂಟಾಚಲದ ಕೊಳದ ಬಳಿಗೆ!! ಸ್ವಾಮಿಯ ಆರ್ತತ್ರಾಣ ಪರಾಯಣತೆಗೆ ಇದಕ್ಕಿಂತ ಬೇರೆ ನಿದ ರ್ಶನ ಬೇಕೆ? ಗಜೇಂದ್ರನ ಉಸಿರು ಉಡುಗುತ್ತಿತ್ತು-- ಎಲ್ಲ ಪ್ರಯತ್ನ ಮುಗಿದಿತ್ತು -- ಎಲ್ಲ ಪರಾಕ್ರಮ -- ಎಲ್ಲ ಅಹಂಕಾರ ಸತ್ತಿತ್ತು. ಅನನ್ಯಥಾಶರಣಂನಾಸ್ತಿ -- ಕಾರುಣ್ಯಭಾವೇನ ರಕ್ಷಮಾಂ -- ಎಂಬ ಸ್ಥಿತಿ ಗಜೇಂ ದ್ರನಲ್ಲಿ ಉಂಟಾಗಿತ್ತು. ಇದು ಪೂರ್ಣಪರಿಪಕ್ವಸ್ಥಿತಿ. ಶ್ರೀಹರಿಯ ಸಂಕಲ್ಪದಂತೆ, ಲೋಕಭೀಕರ ಸುದ ರ್ಶನ ಚಕ್ರದ ಹೊಡೆತಕ್ಕೆ ಮೊಸಳೆ ಸತ್ತಿತು. ಗಜೇಂ ದ್ರನ ಪ್ರಾಣ ಉಳಿಯಿತು. ಇದು ಕ್ಷಣಾರ್ಧದಲ್ಲಾದ ಘಟನೆ. ಇಲ್ಲಿ ಕವಿ ಒಂದು ಸ್ವಾರಸ್ಯವಾದ ಮಾತಾ ಡಿದ್ದಾನೆ. ಆತ ಚಕ್ರಕ್ಕೆ ಆಜ್ಞೆಮಾಡಿದನಂತೆ -- ಅದು ಸೇವಕನಂತೆ ಕಾರ್ಯಮಾಡಿತಂತೆ. ಚಕ್ರವನ್ನಾತ ತರ ಬೇಕೆ? ಕೈಲಿ ಧರಿಸಬೇಕೆ? ಗುರಿನೋಡಿ ಮೊಸ ಳೆಯತ್ತ ಪ್ರಯೋಗಿಸಬೇಕೆ? ಒಂದೂ ಬೇಕಿಲ್ಲ. ಸಂಕಲ್ಪಮಾತ್ರದಿಂದ ಭಗವಂತ ಏನು ಬೇಕಾದರೂ ಮಾಡಬಲ್ಲ. ಜೀವಿ ಯಾವ ನೋವನ್ನು ಬಹುಕಾಲ ಅನುಭವಿಸಿ ಗೋಳಾಡುತ್ತಾನೆ, ಅದು ದೈವಸಂಕಲ್ಪ ದಿಂದ ಕ್ಷಣಾರ್ಧದಲ್ಲಿ ಪರಿಹಾರವಾಗಲಿಕ್ಕೆ ಸಾಕು.

ಬಿಡುಗಡೆಯ ಆ "ಕ್ಷಣ" -- ಮೊದಲೇ ಬರಬಾ ರದೇಕೆ? ಬಂದರೆ ಎಷ್ಟು ಕ್ಷೇಮ ಎಷ್ಟು ಚೆನ್ನ? ಈ ಪ್ರಶ್ನೆಗೆ ಸೃಷ್ಟಿಯಲ್ಲಿ ಉತ್ತರವಿಲ್ಲ.

ಗಜೇಂದ್ರ ಬಯಸಿದ್ದೇನು -- ಆಪನ್ನಿವಾರಣೆ.

ದೊರೆತದ್ದೇನು -- ಆಪನ್ನಿವಾರಣೆಯ ಜತೆಗೆ ಭಗವದ್ದರ್ಶನ -- ಸಮಸ್ತ ದೇವತಾಸಮೂಹ ದರ್ಶನ. ಎಲ್ಲಿ? -- ಅವನಿದ್ದ ಕಡೆಯಲ್ಲೇ. ವೈಕುಂಠಲೋಕವೇ ಇಳಿದು ಬಂತು ತ್ರಿಕೂಟಾಚ ಲದ ಸರೋವರದ ಹತ್ತಿರಕ್ಕೆ. ಇವರನ್ನೆಲ್ಲ -- ಎಳೆದು ತಂದ ಶಕ್ತಿಯಾವುದು? ಗಜೇಂದ್ರನ ಬಲವೇ? ಶಕ್ತಿಯೇ -- ಸಾಮರ್ಥ್ಯವೇ? --ಗಜೇಂದ್ರನ ಭಕ್ತಿ. ಭಕ್ತಿಯೇ ಒಂದು ಶಕ್ತಿ. ಆರ್ತ ಭಕ್ತಿಗೆ ಅದ್ಭುತಶಕ್ತಿ ಇದೆ. ತಾಯಿಯನ್ನು ತನ್ನ ಕಡೆಗೆಳೆದದ್ದು -- ಅವಳು ಎಲ್ಲ ಕೆಲಸಬಿಟ್ಟು ಓಡಿ ಬರುವಂತೆ ಮಾಡುವುದು ಯಾವುದು? ಮಗುವಿನ ಶಕ್ತಿಯೆ? -- ಸಾಮ ರ್ಥ್ಯವೇ?--ಅದರ ಗೋಳಾಟ.

ಪ್ರಾರ್ಥನೆ ಮೇಲೇರಿ ಕೃಪೆಯನ್ನು ಕೆಳಕ್ಕೆಳೆದು ತರುತ್ತದೆ. ಗಜೇಂದ್ರನ ಈ ಕಥೆ ಭಾಗವತದಲ್ಲಿ ಒಂದು ಕಿರುಘಟನೆ. ಪೋತನ ಇದಕ್ಕೆ ವಿಸ್ತಾರವಾದ -- ಬೃಹದಾಕಾರದ ಚೆನ್ನದ ಚೌಕಟ್ಟು ನಿರ್ಮಿಸಿದ. ಇಲ್ಲಿನ ಕೆಲವು ಪದ್ಯಗಳನ್ನು ಕವಿಯ ಆರಾಧ್ಯದೇವ ತೆಯಾದ ಶ್ರೀರಾಮಚಂದ್ರನೇ ಬರೆದಿದ್ದಾನೆಂಬ ಕಥೆ ಜನಜನಿತವಾಗಿದೆ. ಆ ಮಾತು ಹಾಗಿರಲಿ. ಹಾಗೆ ನೋಡಿದರೆ ಎಲ್ಲವನ್ನೂ ಬರೆಸುವಾತ -- ಬರೆಯು ವಾತ ಭಗವಂತನೆ -- ಕವಿ ಎನ್ನಿಸಿಕೊಂಡ ಜೀವಿ ನಿಮಿತ್ತಮಾತ್ರ. ಲೇಖಕನ ಕೈಲಿ ಲೇಖನಿ ಇದ್ದಂತೆ. ಎಲ್ಲ ಕವಿಗಳೂ ಆ ವಿಶ್ವಕವಿಯ ಕೈಯ ಲೇಖನಿ ಗಳೇ.

# ಕಾರ್ಕಳದ ಗೊಮ್ಮಟ

---ಹೊನ್ನಾವರ ಆರ್.ಜಿ. ಶ್ಯಾನಭಾಗ.

ದಕ್ಷಿಣಕನ್ನಡ ಜಿಲ್ಲೆಯ ಕಾರ್ಕಳ ನಾಡಿಗೆ ಸುಪರಿಚಿತ. ಗೊಮ್ಮಟೇಶ್ವರನ ಚರಣಕಮಲಗಳು ಕಾರ್ಕಳದ ದಿನ್ನೆಯ ಮೇಲೆ ಕಾಲೂರಿರುವುದರಿಂದ ಜೈನ ಮತಾವಲಂಬಿಗಳಿಗೆ ಇದು ಕಾಶಿಯಂತಿದೆ. ಧರ್ಮಸ್ಥಳದ ಬಾಹುಬಲಿ ವಿಗ್ರಹವನ್ನು ನಿರ್ಮಿಸಿರುವ ದೇವ ಶಿಲ್ಪಿಯಾದ ದಿ|| ರಂಜಾಳ ಗೋಪಾಲಶೆಣ್ಯೆರವರು ಕಾರ್ಕಳದವರೇ ಆಗಿರುವುದರಿಂದ ದೇಶದಲ್ಲಿಯೇ ಕಾರ್ಕಳ ಪ್ರಮುಖವಾಗಿದೆ.

ಇಲ್ಲಿ ನೋಡಿದ ಕಡೆಗಳೆಲ್ಲೆಲ್ಲ ಕರಿಕಲ್ಲುಗಳೇ ಹೆಚ್ಚಾಗಿರುವುದರಿಂದ ಗೊಮ್ಮಟನು ನೆಲೆಸಿರುವ ಈ ಕ್ಷೇತ್ರ ಕಾರ್ಕಳ ಎಂದು ಸ್ಥಳ ನಾಮವೆತ್ತಿದೆ. ಇಲ್ಲಿಯ ಹೆಬ್ಬಂಡೆಗಳು ಶಿಲಾಕೃತಿಗಳನ್ನು ಮೂಡಿಸಲು ಒಗ್ಗುವಂತಿವೆ. ಇದರಿಂದಲೇ ಶಿಲ್ಪಕಲೆಯ ಪರಂಪರೆ ರಂಜಾಳರ ಮನೆತನಕ್ಕೆ ಪರಿಸರದತ್ತವಾಗಿ ಕರಗತವಾಗಿದೆ, ಕಾರ್ಕಳ ಪ್ರವಾಸಿಗರನ್ನು ಕೈಬಿಸಿ ತನ್ನೆಡೆಗೆ ಕರೆಯುವ ಆಯಸ್ಕಾಂತ ಸ್ವರೂಪವನ್ನು ಹೊಂದಿದೆ. ಇಲ್ಲಿಯ ಚತುರ್ಮುಖ ಬಸದಿಗೊಮ್ಮಟ, ಮಾನಸಸ್ತಂಬ ಅನಂತಶಯನ ಹಾಗೂ ವೆಂಕಟರಮಣ ದೇವಾಲಯಗಳು ಪ್ರೇಕ್ಷಣೀಯ ತಾಣಗಳಾಗಿವೆ.

ಭೈರರಸರು ಕಾರ್ಕಳವನ್ನು ಆಳುತ್ತಿರುವ ಜೈನ ದೊರೆಗಳು, ಕವಿ, ಶಿಲ್ಪಿ ಹಾಗೂ ಸಾಹಿತಿಗಳಿಗೆ ರಾಜಾಶ್ರಮವನ್ನು ನೀಡಿದರು. ಜೈನ ಧರ್ಮವನ್ನೂ ಪೋಷಿಸಿದವರು. ಭರತೇಶ ವೈಭವದ ಕರ್ತೃ ರತ್ನಾಕರಕವಿ ಭೈರದೊರೆಯಿಂದ ರಾಜಾಶ್ರಯವನ್ನು ಪಡೆದಿದ್ದನು, ಕಾರ್ಕಳ ಈ ದೊರೆಗಳ ಕಾಲದಲ್ಲಿ ವೈಭವೋಪೇತವಾಗಿ ಮೆರೆದಿರುವ ವಿಷಯ ಶಿಲಾಶಾಸನ ಮುಖೇನ ತಿಳಿಯಬರುತ್ತದೆ.

ಭೈರರಸರ ವಂಶದಲ್ಲಿ ವೀರಪಾಂಡ್ಯ ನಾಮವಾಸಿದೊರೆ: ಇವನು 'ಅರಿರಾಯರ ಗಂಡರ ದಾವಣಿ' ಎಂಬ ಬಿರುದನ್ನು ಪಡೆದಿದ್ದನು. ಕಾರ್ಕಳದ ಶಿಲಾ ದಿನ್ನೆಯ ಮೇಲೆ ೪೧.೫ ಅಡಿ ಎತ್ತರದ ಬಾಹುಬಲಿಯ ಏಕಶಿಲಾ ವಿಗ್ರಹವನ್ನು ನಿರ್ಮಿಸಿ ಪ್ರತಿಷ್ಠಾಪಿಸಿದನು. ಕ್ರಿ.ಶ. ೧೪೩೨ ರಲ್ಲಿ ಸ್ಥಾಪನೆಗೊಂಡಿರುವ ಈ ವಿಗ್ರಹದ ಎದುರು ಕೆಲವರ್ಷಗಳ ನಂತರ ಬ್ರಹ್ಮಸ್ತಂಬವನ್ನು ಸ್ಥಾಪಿಸಿದನು.

## ನೀಲಾಕಾಶ ದೇಗುಲ :

ಬೃಹದ್ಗಾತ್ರದ ವಿಗ್ರಹವನ್ನು ಯಂತ್ರಗಳ ನೆರವಿಲ್ಲದೆ ಮಾನವ ಶಕ್ತಿಯಿಂದಲೇ ನಿಲ್ಲಿಸಿರುವುದನ್ನು ನೆನಪಿಸಿದರೆ ಮೈಮನ ನವಿರೇಳುತ್ತದೆ. ಭವ್ಯ ಹಾಗೂ ದಿವ್ಯವಾಗಿರುವ ವಿಗ್ರಹ ನೋಡಲು ಹೃದಯಂಗಮ. ಅದರ ನೀಳವಾದ ಕೈಗಳು ವಿಶಾಲವಾದ ವಕ್ಷಸ್ಥಲ, ತ್ಯಾಗಭಾವದ ಮುಖಕಮಲ, ಚೆಂದುಟಿಯಿಂದ ಹೊರುಸೂಸುವ ಮುಗುಳ್ನಗೆ, ಮುಂಗುರುಳುಗಳು ಪ್ರೇಕ್ಷಕರನ್ನು ಮಂತ್ರಮುಗ್ಧರನ್ನಾಗಿ ಮಾಡುತ್ತದೆ. ಗೊಮ್ಮಟೇಶ್ವರನ ಮಹಿಮೆ ದೊಡ್ಡದಾಗಿರುವಷ್ಟೇ ಈ ವಿಗ್ರಹ ಅಷ್ಟೇ ದೊಡ್ಡದಾಗಿದೆ. ಮೂರ್ತಿ ಬೃಹದ್ಗಾತ್ರದ್ದಾದರೂ ಇದರ ಸೊಗಸಿಗೆ ಯಾವ ಚ್ಯುತಿಯು ತಟ್ಟಿಲ್ಲ. ಪಕ್ಷಿಗಳು ಮರೆಯಿಂದಾದರೂ ಇದರ ನೆತ್ತಿಯ ಮೇಲೆ ಹಾರಲಾರವು. ಮುಗ್ಧ ಪಕ್ಷಿಗಳಿಗೆ ಅಂದದ ಈ ಮೂರ್ತಿಯ ಮೇಲೆ ಗೌರವ, ತ್ರಿಲೋಕಗಳೇ ವಿಗ್ರಹಕ್ಕೆ ಮನೆ, ನಿಸರ್ಗವೇ ದೇಗುಲ, ನೀಲಾಕಾಶವೇ ದೇಗುಲದ ಚಾವಣಿ. ದಿಗಂತದಲ್ಲಿ ಮಿನುಗುವ ಸೂರ್ಯ ಚಂದ್ರ ಹಾಗೂ ನಕ್ಷತ್ರಾದಿಗಳು ವಿಗ್ರಹಕ್ಕೆ ನಂದಾದೀಪಗಳಾಗಿವೆ. ರೂಪದಲ್ಲಿ ಅನುಪಮ, ಪರಾಕ್ರಮದಲ್ಲಿ ಚಕ್ರವರ್ತಿಯನ್ನು ಪರಾಜಯಗೊಳಿಸಿದವನು; ಭೂಮಿಯನ್ನು ದಾನ ಮಾಡಿದ ಉದಾರಿ, ತಪಸ್ಸಿಗಾಗಿ ಕೇವಲ ಎರಡು ಹೆಜ್ಜೆಗಳಷ್ಟುಕ್ಷೇತ್ರವನ್ನು ಕೇಳಿ ಅದರಲ್ಲಿಯೂ ಅನ್ಯರಿಗೆ ಹಕ್ಕು ಇದೆ ಎಂದವನು.

ಬತ್ತಲೆಯಾಗಿ ನಿಂತ ಎತ್ತರದ ವಿಗ್ರಹಕ್ಕೆ ಶಿಲ್ಪಿ ಬಂಡೆಯ ಆಸರೆಯನ್ನು ನೀಡಿ, ಹಾವಿನ ಹುತ್ತನ್ನು ಅದರಲ್ಲಿ ಕಡೆದಿರುವನು. ಎರಡೂ ಕಾಲುಗಳ ಮೇಲೆ ಹಬ್ಬಿ ತೋಳುಗಳ ಮೇಲೂ ಹರಡಿರುವ ಮಾಧವೀಲತೆಯ ಬಳ್ಳಿ ನಯನ ಮನೋಹರವಾಗಿದೆ. ಕಾಡುಗುಲಗಂಜಿಯ ಬಳ್ಳಿ ಇದಾಗಿದೆ, ಧ್ಯಾನ ದೃಷ್ಟಿಯಲ್ಲಿರುವ ವಿಗ್ರಹ ಸಾಂಪ್ರದಾಯಿಕ ಶೈಲಿಯದಾಗಿದೆ. ಇದರ ವಿನ್ಯಾಸದಲ್ಲಿ ಸೊಗಸುಗಾರಿಕೆ ಇದೆ, ಕಾಲುಗಳು ಕೊಂಚ ಗಿಡ್ಡದ್ದಾಗಿ ಕಾಣುತ್ತವೆ. ಪಾದ ಪೀಠದಲ್ಲಿ ಅರಳಿದ ಕಮಲದ ವಿನ್ಯಾಸವಿದೆ.

ನಿಲುಭಂಗಿಯಲ್ಲಿರುವ ವಿಗ್ರಹದ ಭುಜ ವಿಶಾಲ ತೋಳುಗಳು ನೆಟ್ಟಗಾಗಿ ನೀಳಾಗಿ ಇಳಿಬಿದ್ದಿವೆ, ನಿರಾಲಂಕೃತ ಗೊಮ್ಮಟನ ಕಿವಿಗಳು ಲಂಬವಾಗಿ ಜೋಲಾಡುತ್ತಿವೆ, ಶಿಲ್ಪಶಾಸ್ತ್ರ ಆಗಮದಂತೆ ವಿಗ್ರಹ ಪಡಿಮೂಡಿಸಿರುವುದರಿಂದ ಯಾವ ಪ್ರಮಾದ ಗೋಚರಿಸಲಾರವು ಎನ್ನುತ್ತಾರೆ ಶಿಲ್ಪಿಗಳು. ಪರಿಪೂರ್ಣ ಸುಂದರ ವಿಗ್ರಹ ಇದೆಂದು ಲೋಕದ ಮೆಚ್ಚುಗೆಗೆ ಪಾತ್ರವಾಗಿದೆ.

## ಶ್ರೀಮದ್ಗಾಂಭೀರ್ಯ :

ಗೋಮಟೇಶ್ವರನನ್ನು ಗೊಮ್ಮಟ, ಕುಕ್ಕುಟೇಶ್ವರ, ಶ್ರೀ ಗೊಮ್ಮಟ ಜಿನ, ಗೊಮ್ಮಟ ಜಿನಾಧೀಶ, ಗೋಮ್ಮಟನಾಥ, ಗೊಮ್ಮಟದೇವ, ಬಾಹುಬಲಿ, ಇವೇ ಮೊದಲಾದ ಹೆಸರಿನಿಂದ ಕರೆಯುತ್ತಿದ್ದಾರೆ. ಬೊಪ್ಪಣ್ಣ ಕವಿ ಗೊಮ್ಮಟಸ್ತುತಿಯಲ್ಲಿ ಈ ಹೆಸರುಗಳನ್ನು ಉಲ್ಲೇಖಿಸಿರುವನು. ಕರ್ನಾಟಕದಲ್ಲಿ ಶ್ರವಣಬೆಳಗೊಳ, ವೇಣೂರು, ಹಾಗೂ ಧರ್ಮಸ್ಥಳಗಳಲ್ಲಿ ಕಾರ್ಕಳ ಗೊಮ್ಮಟ ಶೈಲಿಯ ವಿಗ್ರಹಗಳಿವೆ.

ಬಾಹುಬಲಿಯ ವಿಗ್ರಹಕ್ಕೆ ಅರವತ್ತು ವರ್ಷಗಳಿಗೊಮ್ಮೆ ಮಸ್ತಕಾಭಿಷೇಕ ನಡೆಯುವುದು, ಹರಕೆಹೊತ್ತವರು ನಡುಮಧ್ಯೆ ಈ ಮಂಗಳ ಕಾರ್ಯವನ್ನು ನಡೆಸಬಹುದಾಗಿದೆ. ಪ್ರತಿ ನಿತ್ಯವೂ ವಿಗ್ರಹಕ್ಕೆ ಪಾದ ಪೂಜೆ ನಡೆಯುವುದಲ್ಲದೆ ರಥೋತ್ಸವ ಜರುಗುವುದು. ಇದಕ್ಕೆ ಬೆಟ್ಟದ ತೇರು ಎನ್ನುವರು.

ಜನವರಿ ೨೮--೧೯೯೦ ರಂದು ಕಾರ್ಕಳದ ಮಹಾಬಲಿಗೆ ಮಸ್ತಕಾಭಿಷೇಕ ಅದ್ದೂರಿಯಿಂದ ನಡೆಯಿತು. ಅಂದು ಶ್ರೀಮದ್ಗಾಂಭೀರ್ಯ ಕಳೆಯನ್ನು ಪಡೆದ ಕಾರ್ಕಳದೆಲ್ಲೆಡೆಯಲ್ಲಿ ಹಬ್ಬದ ವಾತಾವರಣ ಕವಿದಿತ್ತು. ಕರ್ನಾಟಕ ಸರಕಾರ ಈ ಘನಕಾರ್ಯಕ್ಕೆ ಪಾರಂಪರಿಕ ನೆರವನ್ನು ನೀಡಿ ಅಭಿಷೇಕ ಸಾಂಗವಾಗಿ ನೆರವೇರಲ್ಪಡಲು ಅನುವುಮಾಡಿಕೊಟ್ಟಿತು. ಮಹಾಮಸ್ತಕಾಭಿಷೇಕ ನಡೆಸುವುದು ಭಗೀರಥ ಪ್ರಯತ್ನವೇ ಆಗಿತ್ತು, ಬೃಹದ್ಗಾತ್ರದೆತ್ತರದ ವಿಗ್ರಹಕ್ಕೆ ಶುದ್ಧೋದಕ ಕುಂಭಗಳನ್ನೂ ಹಾಗೂ ಪಂಚಾಮೃತಾದಿ ಸಾಮಗ್ರಿಗಳನ್ನೂ ನೆತ್ತಿಯವರೆಗೆ ಸಾಗಿಸಲು ಅಟ್ಟಣೆಕೆಗಳನ್ನು ನಿರ್ಮಿಸಲಾಗಿತ್ತು. ನಿರ್ದಿಷ್ಟ ಲಗ್ನಕಾಲದಲ್ಲಿಯೇ ಮಹಾಮಸ್ತಕಾಭಿಷೇಕ ನಡೆತಿರುವುದು ಸ್ತುತ್ಯಾರ್ಹವಾಗಿದೆ.

## ಬಾಹುಬಲಿ ಮಾಹಾತ್ಮೆ:

ಒಂದು ದಿನ ಭರತ ಚಕ್ರವರ್ತಿ ನಾಡಿನಲ್ಲೆಲ್ಲ ತನ್ನ ಸಾರ್ವಭೌಮತ್ವವನ್ನು ಸ್ಥಿರಪಡಿಸಲು ಸಂಕಲ್ಪಿ

(36ನೇ ಪುಟನೋಡಿ)

# ಭಕ್ತಕವಿ ಮಲ್ಲರಸ

---ಪ್ರ. ಶ್ರೀನಿವಾಸ ಭಟ್ಟ.

ತಿರುಪತಿ ಕ್ಷೇತ್ರವು ಕರ್ನಾಟಕದ ನೆರೆ ರಾಜ್ಯದಲ್ಲಿ ೂ, ಬಹಳ ಪುರಾತನ ಕಾಲದಿಂದಲೂ ಇಲ್ಲಿಯ ಮನೆತನದವರಿಂದಲೂ, ಜನಸಾಮಾನ್ಯರಿಂ ೂ, ವಿಶೇಷವಾಗಿ ಪೂಜಿಸಲ್ಪಡುತ್ತಿರುವ ಪರ ಪವಿತ್ರ ಸನ್ನಿಧಾನವಾಗಿರುತ್ತದೆ. ವಿಜಯನಗರ ೂ ಮೈಸೂರಿನ ದೊರೆಗಳು ತಿರುಪತಿಯ ಭಕ್ತ ದ್ದರು. ಕೃಷ್ಣರಾಯ ಭಾರತವನ್ನು ವಿರಚಿಸಿ ತಿಮ್ಮಣ್ಣ ಕವಿ, ಪುರಂದರ, ಕನಕದಾಸರು, ನಯ್ಯಕವಿ, ಅಂತೆಯೆ ಮೈಸೂರು ರಾಜಮನೆ ವ ಆಶ್ರಯದಲ್ಲಿ ಕಾವ್ಯರಚನೆ ಮಾಡಿರುವ ಹತ್ತು ವು ಕವಿಗಳು ತಿರುಪತಿ ವೆಂಕಟರಮಣನಲ್ಲಿ ಭಕ್ತಿ ಂದ ಸ್ಪೂರ್ತಿ ಪಡೆದಂತಿದೆ. 'ದಶಾವತಾರಚ ಎಂಬ ಕನ್ನಡ ಚಂಪೂಕಾವ್ಯವನ್ನು ಬರೆದಿರುವ ಲ್ಲರಸಕವಿಯು ಕೂಡ ತನ್ನ ಕೃತಿಯಾದಿಯಲ್ಲಿ ಮಲೆಯಧಿಪತಿಯನ್ನು ನೆನೆವರಿಕೆ ಮಾಡಿರು . "ತುಂಗಬಲ ಶೌರಿ ಮಹಿಮಂ, ಗಜವ ದ ಶಾರ್ಪೋ ಸಲಹೆನ್ನ ತಿರುವೆಂಕಟ ದೀಶಾ, -೪) ಖ್ಯಾತನ್ನೈ ಶ್ರೀವೆಂಕಟೇಶ (೧--೬) ಪುಂಡ ನೇತ್ರದ್ವಂದ್ವ ವೆಂಕಟೇಶ್ವರಾ (೧--೩) ಇಂತಹ ಗಳು ಈ ಕಾವ್ಯದ ಆರಂಭದಲ್ಲಿವೆ. ಕರ್ನಾಟಕ ಚರಿತ್ರೆಯ ಎರಡನೇ ಭಾಗದಲ್ಲಿ ಈ ಕುರಿತು ೆ ಹೇಳಲಾಗಿದೆ. "ಇವನು ದಶಾವತಾರಚ ಯನ್ನು ಬರೆದಿದ್ದಾನೆ. ಇವನ ತಂದೆ ತಿಮ್ಮ ಮಂತ್ರಿ. ತಾಯಿ ತಿಪ್ಪಾಂಬಿಕೆ. ಗುರುಸದಾ ವ. ಸ್ಥಳ ನಾಗಮಂಗಲ. ಒಂದು ಹಸ್ತಪ್ರತಿ ಲ್ಲಿ ಚಿಕುಪಾಧ್ಯಾಯನ ಆಜ್ಞಾನುಸಾರವಾಗಿ ಪ್ರತಿ ಡಲ್ಪಟ್ಟಿತೆಂದು ಹೇಳಿದೆ. ಚಿಕುಪಾಧ್ಯಾಯ ಕಾಲ (ಕ್ರಿ.ಶ. ೧೬೮೦) ಈ ಕವಿಬಾಳಿರಬೇಕು. ಪತಿ ವೆಂಕಟರಮಣನಲ್ಲದೆ ಲಕ್ಷ್ಮಿ, ಈಶ್ವರ, ರ್ವತೀ, ಗಣೇಶ, ಪರಾಶರ, ಭೀಷ್ಮ, ವಿಭೀ , ನಾರದ ರುಕ್ಮಾಂಗದಾದಿಗಳನ್ನೂ ನೆನೆದಿರು . ಪೂರ್ವಕವಿಗಳಲ್ಲಿ ಕಾಳಿದಾಸ, ಹರಿಹರ, ಭಟ್ಟ, ಕುಮಾರವ್ಯಾಸ (ಶುಕರೂಪ) ನನ್ನು ಸ್ಮರಿ ವನು. ಈ ಕಾವ್ಯದಲ್ಲಿ ೧೧ ಆಶ್ವಾಸಗಳಿದ್ದು, ಕಂದ, ವಚನಗಳು ೧೧೭೯ ಇವೆ. ಮುದ್ರಣ ಂಡ ಪ್ರತಿಯಲ್ಲಿದ್ದಂತೆ ಈತನು ಶ್ರೀವತ್ಸಗೋ ವನು. ಕಮ್ಮೆವಂಶದ ದ್ವಿಜನು ನಾಗಮಂಗಲ ಕೂರು ಜಿಲ್ಲೆಯ ಬೆಳ್ಳಾವಿ ತಾಲೂಕಿಗೆ ಸೇರಿದ ಮ ಗ್ರಾಮ. ಇದು ಹಿಂದೆ ಅಗ್ರಹಾರವಾಗಿತ್ತು. "ಕೃತಿಗಧಿ ನಾಯಕಂ ವಿಮಲವಾರಿಧಿಜಾತೆ ಯಧೀಶ ವಿಷ್ಣು" ಕಾವ್ಯದ ನಾಯಕ ವಿಷ್ಣು ಎಂದು ಸ್ಪಷ್ಟ ಪಡಿಸಿರುವನು.

ಶ್ರೀಮನ್ನಾರಾಯಣನು ಭೂಭಾರಹರಣದ ಉದ್ದೇಶದಿಂದ ಹತ್ತು ಅವತಾರಗಳನ್ನು ಧರಿಸಿ ಬರುವ ಕತೆ ಇದರಲ್ಲಿದೆ. ಇದರಲ್ಲಿರುವ ಕಥೆಗಳು ಬೇರೆ ಬೇರೆ ಕೃತಿಗಳಾಗಿ ರಚನೆಗೊಂಡುದಿದೆ. ಮಲ್ಲರಸನು ಎಲ್ಲಾ ಕತೆಗಳೂ ಒಂದೆಡೆ ದೊರಕುವಂತೆ ಮಾಡಿದ್ದಾನೆ. ಕಾವ್ಯದಲ್ಲಿ ಅವಕಾಶ ಸಿಕ್ಕಿದಾಗಲೆಲ್ಲ, ಶ್ರೀ ವಿಷ್ಣುವಿನ ಸ್ತೋತ್ರ ಮಾಡಿದ್ದಾನೆ. ಕಾವ್ಯಾಂತ್ಯದಲ್ಲಿ ರಗಳೆ ಛಂದಸ್ಸಿನಲ್ಲಿ ಶ್ರೀ ಹರಿಯ ಲೀಲೆಗಳನ್ನು ಮನಸಾರೆ ಹೊಗಳಿರುವನು. ದಶಾವತಾರದ ಕತೆಗೆ ಸಂಬಂಧಿಸಿದಂತೆ ಇರುವ ಕತೆಗಳಿಗಿಂತ ಕೆಲವು ಹೊಸತನಗಳು ಮಲ್ಲರಸನ ಕೃತಿಯಲ್ಲಿ ಕಂಡುಬರುತ್ತದೆ. ಇವಕ್ಕೆಲ್ಲ ಬೇರೆ ಬೇರೆ ಮೂಲಗಳಿರಬಹುದು. ಕವಿಯ ಅನುಭವದ ವಿಸ್ತಾರಕ್ಕೆ ಇದು ನಿದರ್ಶನವಾಗಿದೆ. ಇದರ ಕತೆಯಂತೆ ಸಮುದ್ರಮಥನದ ವೇಳೆ ವಾಲಿಸುಗ್ರೀವರಿಬ್ಬರೂ ಬಂದಿದ್ದರು. ಕರಾವಳಿ ಕರ್ನಾಟಕದ ಬಯಲಾಟದ ಕತೆಯಲ್ಲಿ ವಾಲಿಯೊಬ್ಬನೇ ಬಂದಂತಿದೆ. ಕನ್ನಡ ಭಾಗವತದಲ್ಲಿ ಇತರ ಪ್ರಸ್ತಾಪವಿಲ್ಲ. ತೊರವೆರಾಮಾಯಣದಲ್ಲಿ ದಶರಥನಿಗೆ ತಾಂಡವನೆಂಬ ಮುನಿಕುಮಾರನು ಶಪಿಸಿದನೆಂದಿದ್ದರೆ, ಇದರಲ್ಲಿ ಚಮಡಲನೆಂಬವನೆಂದಿದೆ. ಬತ್ತಲೇಶ್ವರ ಕವಿಯ ಕವುಶಿಕರಾಮಾಯಣದಲ್ಲೂ ಚವುಡಲನೆಂದಿದೆ. ಮಲ್ಲರಸನು ಸೀತೆ ರಾವಣನಿಗೆ ಪುತ್ರಕಾಮೇಷ್ಟಿಯಲ್ಲಿ ದೊರಕಿದವಳೆಂದೂ, ಅವಳಿಂದ ಲಂಕಾನಗರಕ್ಕೆ ಅನಿಷ್ಟವಿದೆ ಎಂದು ದೈತ್ಯಗುರುಗಳು ಸೂಚಿಸಿದಂತೆ, ಅವಳನ್ನು ಸಮುದ್ರಕ್ಕೆ ಎಸೆಯುವನು. ಮುಂದೆ ಅವಳು ಜನಕನಿಗೆ ಸಿಕ್ಕಿದಳೆನ್ನುವನು. ಅಂಜನೆ, ವಾಲಿ, ಸುಗ್ರೀವರು ಗೌತಮ ಮತ್ತು ಅಹಲ್ಯೆಯರಲ್ಲಿ ಜನಿಸಿದವರು. ಇಲ್ಲಿಯೂ ಬತ್ತಲೇಶ್ವರ ಕವಿಯ ವರ್ಚಸ್ಸಿದ್ದಂತಿದೆ. ಪಂಚವಟಿಯ ಎಲೆಮನೆಯಿಂದ ಸೀತೆಯನ್ನು ಬಿಟ್ಟು ರಾಮನನ್ನು ಹುಡುಕಲು, ಲಕ್ಷ್ಮಣನು ಹೊರಡುವಾಗ, "ಸಪ್ತಮಂಡಲಮಂ ಬರೆದು, ನೀಮಿದಂ ದಾಂಟದಿರಿ" ಎಂದು ಹೇಳಿದನೆಂಬ ವಾಕ್ಯವಿದೆ. ಈ ವಿಷಯ ಕೃತ್ತಿವಾಸನ ಬಂಗಾಳಿರಾಮಾಯಣ, ಬತ್ತಲೇಶ್ವರ ಕವಿಯ ಹೇಳಲ್ಪಟ್ಟಿದೆ. ಆದರೆ ತೊರವೆರಾಮಾಯಣದಲ್ಲಿ ಈ ವಿಷಯ ಕೈಬಿಟ್ಟಂತಿದೆ. ಇನ್ನೂ ಕೂಡ ಹಲವು ಉದಾಹರಣೆಗಳು ಇವೆ.

ಮಲ್ಲರಸನ ಕಾವ್ಯದ ಮೇಲೆ ಕನ್ನಡದ ಬೇರೆ ಕೃತಿಗಳ ಪ್ರಭಾವವಿದ್ದಂತೆ ಕಂಡುಬರುತ್ತದೆ. ಇಲ್ಲಿರುವ

ಸಸಿಯೇ ಸಂಪಗೆಯೇ ತಮಾಲ
ಲತೆಯೇ ಬೆಳ್ದಿಂಗಳೇ ಮುಗ್ಧಸಾ
ರಸಮೇ ಕಾಣಿರೆ ಪೂರ್ವಚಂದ್ರ
ಮುಖಿಯಂ ಸಚ್ಚಂಪಕಾಮೋದಮಾ
ನನೆಯಂ ದಿವ್ಯಲತಾಂಗಿಯಂ
ಧವಳನೇತ್ರಾಪಾಂಗೆಯಂ ಪಂಕಜೋ
ಲ್ಲಸದತ್ಯುನ್ನತ ಕುಟ್ಮಲಸ್ತನಭರ
ಪ್ರಖ್ಯಾತೆಯಂ ಸೀತೆಯಂ (೮--೨೪)

ಈ ಪದ್ಯವು ಪಂಪರಾಮಾಯಣದ

ಕಳಹಂಸಲಸಯಾಸೆಯಂ
ಮೃಗಮದಾಮೋದಾಸ್ಯ ನಿಶ್ವಾಸೆಯಂ
ತಳಿರೇ ತಾವರೆಯೇ
ಮದಾಳಿಕುಲಮೇ ಕರ್ನೈದಿಲೇ ಮತ್ತಕೋ
ಕಿಳಮೇ ಕಂಡಿರೆ ಪಲ್ಲವಾಧರೆಯನಂ
ಭೋಜಾಸ್ಯೆಯಂ ಭೃಂಗ ಕುಂ
ತಳಂ ಕೈರವ ನೇತ್ರೆಯಂ
ಪಿಕರವ ಪ್ರಖ್ಯಾತೆಯಂ ಸೀತೆಯಂ (೯--೧೧೮)

ಪದ್ಯದಿಂದ ಪ್ರಭಾವಿತವಾಗಿದೆ. ಕವಿಯು ಪ್ರಾಚೀನ ಇತಿಹಾಸ ಅಧ್ಯಯನದಲ್ಲಿ ಆಸಕ್ತನಾಗಿರಬಹುದು. ಪ್ರಾಚೀನ ಶಿಲಾಶಾಸನವೊಂದರ ಪದ್ಯದ ಅನುಕರಣೆಯೂ, ಈ ಕಾವ್ಯದಲ್ಲಿದೆ. ವಿಜಯನಗರದ ಆಡಳಿತದ ಕಾಲದ (ಕ್ರಿ.ಶ. ೧೪೪೧) ಒಂದು ಶಾಸನವು ಬಳ್ಳಾರಿ ಜಿಲ್ಲೆಯ ಹಂಪಿಯ ಕೃಷ್ಣಸ್ವಾಮಿ ದೇವಾಲಯದ ಬಳಿಯಿದೆ. ಇದನ್ನು ಆ ಕಾಲದ ಮಂತ್ರಿ ಲಕ್ಷ್ಮೀಧರನೆಂಬವನು ಬರೆಸಿದನು. ಅದರಲ್ಲಿರುವ ಒಂದು ಪದ್ಯ ಹೀಗಿದೆ.

ಕರೆಯಂ ಕಟ್ಟಿಸು ಬಾವಿಯಂ ಸವೆಸು
ದೇವಾಗಾರಮಂ ಮಾಡಿಸ
ಜ್ಜೆರೆಯೊಳ್ ಸಿಲ್ಕಿಧದನಾಥರಂ ಬಿಡಿಸು,
ಮಿತ್ರರ್ಗಿಂಬುಕೆಯ್ ನಂಬಿದ
ರ್ಗೆರೆವೆಟ್ಟಾಗಿರು ಶಿಷ್ಟರಂ
ಪೊರೆಯೆನುತ್ತಿಂತೆಲ್ಲವಂ ಪಿಂತೆ ತಾ
ಯೆರೆದಳ್ಪಾಲೆರೆವಂದು ತೊಟ್ಟು
ಕಿವಿಯೊಳ್ ಲಕ್ಷ್ಮೀಧರಾಮಾತ್ಯನಾ

ಈ ಪದ್ಯದ ಅನುಕರಣೆ ಕಾವ್ಯದಲ್ಲಿ ಕೆಳಗಿನ ಪದ್ಯದಲ್ಲಿ ಕಾಣಬಹುದು.

ಗುಡಿಯಂ ಕಟ್ಟಿಸು, ಭೇರಿಯಮೊಡೆಸು,
ಕಾರಾಗಾರ ಗೀರ್ವಾಣರಂ
ಬಿಡಿಸುರ್ವೀ ಸುರಸಂಪ್ರದಾಯರ
ಸುವರ್ಣಾ ಗಾರಮಂ ಕೂಡುಮೆ
ಲ್ನುಡಿಯಿಂ ಸತ್ಕವಿಗಾಯಕರ್ಗೆ
ಹಣಮಂ ಚೆಲ್ಲಕ್ಕರಂ ಪುತ್ರನಂ
ಪಡೆದಳ್ ದೇವರರಾಣಿಯೆಂದೊದರಿದರ್
ಕೈಸೂರೆಯಿಂ ಸೇವಕರ್ (೫--೯)

ಪಂಪನ ಆದಿಪುರಾಣ, ಹರಿಹರನ ಗಿರಿಜಾಕಲ್ಯಾಣ, ಮೊದಲಾದ ಕಾವ್ಯಗಳ ಪ್ರಭಾವವೂ ಮಲ್ಲರಸನ ದಶಾವತಾರ ಚರಿತೆಯಲ್ಲಿದೆ. ಮೇಲೆ ಹೇಳಿದ ಶಾಸನವು ಆ ಕಾಲದಲ್ಲಿ ಬಹುಜನಪ್ರಿಯವಾದ ನೀತಿವಾಕ್ಯವಾಗಿರಬಹುದು. ಪುರಂದರ ದಾಸರ ಒಂದು ಹಾಡಿನಲ್ಲಿ (ಪುರಂದರ ಸಾಹಿತ್ಯದರ್ಶನ ಭಾಗ -- ೩ -- ೧೨೨)

ಕೆರೆಯಕಟ್ಟಿಸು ಮತ್ತೆ ಪೂದೋಟ ಹಾಕಿಸು
ಸೆರೆಯ ಬಿಡಿಸು ಪುಣ್ಯ.........................

ಎಂಬ ಉಕ್ತಿಯಿದೆ. ಸಾಧಾರಣ ೧೭ನೇ ಶತಮಾನದ ಕವಿ ಶರಜಾನಾಗಯ್ಯನೆಂಬ ಕವಿಯ 'ಶುಕ್ತಸಪ್ತತಿ' ಪದ್ಯಕಾವ್ಯದಲ್ಲಿರುವ
ಕೆರೆಯ ಕಟ್ಟಿಸು ದೇವತಾಗೃಹ
ದಿರವ ನಿರ್ಮಿಸು ಅಗ್ರಹಾರವ
ಪರಿಯ ಶೋಭಿಸಿ ರಚಿಸು
ದೆಳೆಸೈ ಸಾಲುಮರಗಳನು
ಅರವಟಿಗೆಗಳನಲ್ಲಿ ಗಲ್ಲಿಗೆ
ಸ್ಥಿರಗೊಳಿಸಿ ಗಂಗೋದಕದಿಸ
ರ್ವರನು ತೃಪ್ತಿಸು
ಅನ್ನವಸ್ತ್ರವ ನೆಸಗು ನೀನೆಂದ (೨೨--೨೦)

ಪದ್ಯವೂ ಶಾಸನ ಪದ್ಯದಿಂದ ಪ್ರಭಾವಿತ. ಶುಕಸಪ್ತತಿಯ ಸಂಧಿ ೩೪--೩೩, ೩೪--೩೭ನೇ ಪದ್ಯಗಳಲ್ಲೂ ಈ ಭಾವವಿದೆ. ಕನ್ನಡ ಹಳೆಯ ಕಾವ್ಯವೊಂದರ ಸಾಮಾನ್ಯ ಪರಿಚಯವಿಲ್ಲಿದೆ. ಆಸಕ್ತರು ಅಧ್ಯಯನ ನಡೆಸಿದರೆ ಇನ್ನಷ್ಟು ಸರಸ ವಿಷಯಗಳು ದೊರಕಬಹುದು. ಇಂತಹ ಪ್ರಾಚೀನ ಕೃತಿಗಳನ್ನು ಪ್ರಕಟಿಸುತ್ತಿರುವ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಗೆ ಕನ್ನಡಿಗರೆಲ್ಲರೂ ಚಿರಋಣಿಗಳಾಗಿರಬೇಕು.



34 ನೇ ಪುಟದಿಂದ)

ಸಿದನು, ಇದಕ್ಕಾಗಿ ತನ್ನ ಸೇನೆಯನ್ನು ಸಜ್ಜುಗೊಳಿಸಿ ದಿಗ್ವಿಜಯಕ್ಕಾಗಿ ದಂಡಯಾತ್ರೆಯನ್ನು ಕೈಗೊಂಡನು. ಚಕ್ರವರ್ತಿ ಚಕ್ರರತ್ನ ಎಂಬ ಅಪರೂಪದ ಆಯುಧವನ್ನು ಹೊಂದಿದ್ದನು. ಅದನ್ನೇ ಮುಂದುಮಾಡಿಕೊಂಡು ಸೇನೆಯೊಡನೆ ಸಾಗಿದನು. ನಾಡಿನ ರಾಜರುಗಳೆಲ್ಲರು ಇದಕ್ಕೆ ಬೆದರಿ ತಲೆತಗ್ಗಿಸಿ ಕಾದಾಡದೆ ಭರತಚಕ್ರವರ್ತಿಗೆ ಶರಣಾಗತರಾದರು. ಕಪ್ಪ ಕಾಣಿಕೆಯನ್ನು ನೀಡಿ ಅವನ ಸಾರ್ವಭೌಮತ್ವವನ್ನು ಮನ್ನಿಸಿದರು. ಅವನ ತೊಂಬತ್ತೆಂಟೂ ಮಂದಿ ತಮ್ಮಂದಿರೂ ಭರತಚಕ್ರವರ್ತಿಗೆ ಶರಣಾಗತರಾದರು, ಆಯುಧ ಚಕ್ರರತ್ನ ಎಲ್ಲಿಯೂ ಅಡ್ಡಿ ಆತಂಕಗಳಿಲ್ಲದೆ, ನಿರಾತಂಕವಾಗಿ ಸೇನೆಯೊಡನೆ ಸಾಗಿತು. ಎಲ್ಲೆಡೆಯಲ್ಲಿ ದಿಗ್ವಿಜಯವನ್ನು ಸಾಧಿಸಿದ ಚಕ್ರವರ್ತಿಯ ಸೇನೆ ಜಯಕಾರಹಾಕುತ್ತ ಅಯೋಧ್ಯೆಗೆ ಹಿಂದಿರುಗಿತು.

ಅರಮನೆಗೆ ಬಂದಾಗ ಚಕ್ರವರ್ತಿಯ ಚಕ್ರರತ್ನ ಆಯುಧ ಗಿರ್ರನೆ ಸುತ್ತು ಹೊಡೆದು ನಿಂತಿತು. ನೆರೆದವರಿಗೆ ಸೋಜಿಗವೆನಿಸಿತು. ಈ ಪ್ರಸಂಗ ಅರ್ಥಮಾಡಿಕೊಳ್ಳಲಾಗಲಿಲ್ಲ. ಇದಕ್ಕೆಲ್ಲ ಕಾರಣ ಚಕ್ರವರ್ತಿಯ ತಮ್ಮನಾದ ಪೋದನಪುರದ ದೊರೆ ಬಾಹುಬಲಿಯೆಂದು ಅರಮನೆಯೊಳಗಿಂದ ವರದಿಯೊಂದು ಬಂದಿತು. ತಾನು ಭರತ ಚಕ್ರವರ್ತಿಗೆ ಮಣಿಯಲಾರೆನೆಂದು ಬಾಹುಬಲಿ ಸವಾಲನ್ನೊಡ್ಡಿದನು, ಕದನಕ್ಕಾಗಿ ಅಣ್ಣತಮ್ಮಂದಿರಿಗಾಗಿ ರಣರಂಗ ಸಜ್ಜುಗೊಂಡಿತು. ಧರ್ಮಯುದ್ಧದಂತೆ ದೃಷ್ಟಿಯುದ್ಧ ನಡೆಯಿತು. ಬಾಹುಬಲಿಯೇ ಇದರಲ್ಲಿ ಮೇಲ್ಮೆಯನ್ನು ಸಾಧಿಸಿದನು. ಅನಂತರ ಜಲಯುದ್ಧ, ಬಾಹುಯುದ್ಧ, ಮಲ್ಲಯುದ್ಧ ಹಾಗೂ ಖಡ್ಗಯುದ್ಧಗಳೆಲ್ಲವೂ ನಡೆದವು. ನಡೆದೆಲ್ಲ ಯುದ್ಧಗಳಲ್ಲಿ ಬಾಹುಬಲಿಯದೇ ಮೇಲ್ಮೆಯಾಯಿತು ಭರತನು ನೆಲಕ್ಕಪ್ಪಳಿಸಲ್ಪಟ್ಟನು. ಬಾಹುಬಲಿಗೆ ಜಯಕಾರ ಬಿದ್ದಿತು, ಪರಾಜಯದಿಂದ ಅವಮಾನಿತನಾದ ಭರತ ತನ್ನ ಕೊನೆಯ ಆಯುಧವಾದ ಚಕ್ರರತ್ನವನ್ನು ಪ್ರಯೋಗಿಸಿದನು, ಬಾಹುಬಲಿಯ ಹತ್ತಿರ ಇಂಥ ಆಯುಧವಿರಲಿಲ್ಲ. ಬಾಹುಬಲಿಯ ವಜ್ರದೇಹದಿಂದಾಗಿ ಚಕ್ರರತ್ನ ಸೋಲನ್ನು ಅನುಭವಿಸಿ ನಿಂತಿತು; ಬಾಹುಬಲಿ ಚಕ್ರದ ಒಡೆಯನಾದ. ಚಕ್ರೇಶ್ವರನಾದನು; ತನ್ನ ಸ್ವಾಭಿಮಾನವನ್ನು ಸರಿಯಾದ ಅಂಕೆಯಲ್ಲಿ ಇರದಿರುವುದರಿಂದ ತನಗೆ ತಕ್ಕ ಪ್ರಶಸ್ತಿ ಇದಾಯಿತೆಂದು ಭರತ ಮರುಗಿ ತನ್ನ ಸಾಮ್ರಾಜ್ಯವನ್ನು ಧಾರೆ ಎರೆಯಲು ಬಾಹುಬಲಿಯೆಡೆಗೆ ಬಂದನು. ಒಂದು ಅಡಿ ನೆಲಕ್ಕಾಗಿ ತಾನು ಬವಣೆ ಪಡುವವನಲ್ಲ. ಆದರೆ ನಿನ್ನ ಅಹಂಕಾರ ಮುರಿಯಲೋಸುಗವೇ ತಾನು ಈ ಯುದ್ಧ ಮಾಡಿರುವೆನೆಂದು ಬಾಹುಬಲಿ ಭರತನಿಗೆ ಉತ್ತರಿಸಿದನು, ಮನುಕುಲದ ಶಾಂತಿ ಹಾಗೂ ಕಲ್ಯಾಣಕ್ಕಾಗಿ ತಪವನ್ನಾಚರಿಸಲು ತಾನು ಉತ್ಸುಕನಾಗಿರುವನು. ನನಗೆ ರಾಜ್ಯದಾಡಳಿತದ ದಾಹವಿಲ್ಲ. ಎಂದು ಬಾಹುಬಲಿ ಕಾಡಿಗೆ ನಡೆದನು. ಅವನ ಅಗಲುವಿಕೆಯ ದೃಶ್ಯ ಹೃದಯದ್ರಾವಕವಾಗಿತ್ತು.

ಕಾಡಿನಲ್ಲಿ ನಿಂತ ಭಂಗಿಯಲ್ಲಿ ಕಾಯೋತ್ಸರ್ಗವೆಂಬ ತಪವನ್ನಾಚರಿಸಿದನು, ಬಿಸಿಲು, ಮಳೆ, ಗಾಳಿ, ಹಸಿವು, ನೀರಡಿಕೆ, ಆಯಾಸ, ಹಾಗೂ ನಿದ್ದೆ ಯಾವದೂ ಅವನ ತಪೋಭಂಗಮಾಡಲಿಲ್ಲ. ಬಯಕೆಗಳೆಲ್ಲವನ್ನೂ ಬಿಗಿಹಿಡಿದು, ಮನಸ್ಸನ್ನು ನಿಲ್ಲಿಸಿ ಚಿತ್ತವನ್ನು ಕೈವಲ್ಯದಲ್ಲಿ ಮೂಡಿಸುವ ಈ ಸಾಧನೆ ಕಠೋರವಾದುದು, ದೀರ್ಘಕಾಲದ ನಂತರ ಪ್ರಕೃತಿಯ ವಿಕೋಪ ಅವನನ್ನು ವಿವಸ್ತ್ರನನ್ನಾಗಿ ಮಾಡಿತು. ಅಲ್ಲಿಂದಾಚೆ ದಿಕ್ಕೇ ಅವನಿಗೆ ಬಟ್ಟೆಯಾಗಿ ದಿಗಂಬರನಾದನು, ಬಾಹುಬಲಿಗೆ ಮನದಲ್ಲಿ ಒಂದು ಕೊರಗು ಇದ್ದಿತ್ತು, ತಪಗೈಯಲು ತಾನು ಆಕ್ರಮಿಸಿರುವ ತಾಣ ಭರತನ ಸಾಮ್ರಾಜ್ಯದ ಭಾಗ. ಇದರಿಂದ ತಪದಲ್ಲಿ ತಾನು ಸಿದ್ಧಿ ಪಡೆಯಲಾರೆನು ಎನ್ನುವುದೇ ಆ ಕೊರಗು ಅವನ ಮನವನ್ನು ಕೊರೆಯುತ್ತಿತ್ತು. ಇದನ್ನರಿತ ಭರತ ತಮ್ಮನಲ್ಲಿಗೆ ಬಂದು ತಪಸ್ಸಿಗಾಗಿ ನಿಂತತಾಣವನ್ನು ಧಾರೆ ಎರೆದನು.

ನೆಮ್ಮದಿಯಿಂದ ತಪವನ್ನಾಚರಿಸಿ, ಬಾಹುಬಲಿ ಜಿನನಾದನು, ತಪವೂ ದೀರ್ಘಕಾಲದ್ದಾದುದರಿಂದ ಅವನ ಕಾಲುಗಳ ಮೇಲೆ ಹಾವಿನ ಹುತ್ತುಗಳು ಬೆಳೆದಿದ್ದವು. ಇದರ ಅರಿವೇ ಬಾಹುಬಲಿಗೆ ಇರಲಿಲ್ಲ. ಕುಕ್ಕುಟ ಸರ್ಪಗಳು ಈ ಮುನಿಯ ಮೇಲೆ ಅಡ್ಡಿ ಆತಂಕಗಳಿಲ್ಲದೆ ಹರಿದಾಡುತ್ತಿದ್ದವು. ಅದರಿಂದಲೇ ಇವನು ಕುಕ್ಕುಟೇಶ್ವರ ಎಂದು ಕರೆಯಲ್ಪಟ್ಟನು.

ಬಾಹುಬಲಿ ತಪೋಬಲದಿಂದ ಜಿನನಾದೊಡನೆ ತಮ್ಮ ಭರತಚಕ್ರವರ್ತಿ ಬಂದು ಭಕ್ತಿಯಿಂದ ಅವನ ಪೂಜೆಮಾಡಿದನು. ಈ ಸಂದರ್ಭದ ನೆನಪಿಗಾಗಿ ಪೊದನಪುರದಲ್ಲಿ ಬಾಹುಬಲಿಯ ಸ್ವರ್ಣ ವಿಗ್ರಹವನ್ನು ಮಾಡಿಸಿಟ್ಟನು.



# ವಾರ್ತಾಲಹರಿ

## ತಿರುಮಲೆಯಲ್ಲಿ ವೇದ ವಿಶ್ವವಿದ್ಯಾಲಯ

ತಿರುಮಲೆಯ ಧರ್ಮಗಿರಿಯ ಗುರುಕುಲ ವಿದ್ಯಾನಿಲಯದಲ್ಲಿ ವಿಶ್ವವಿದ್ಯಾನಿಲಯಕ್ಕೆ ಬೇಕಾದ ಎಲ್ಲ ಅನುವುಗಳೂ ಇರುವುದರಿಂದ ಇಲ್ಲಿ ವೇದ ವಿದ್ಯಾಲಯವನ್ನು ಸ್ಥಾಪಿಸಲು ತಿ.ತಿ.ದೇ. ಪಾಲಕ ಮಂಡಳಿ ಆಮೋದವನ್ನು ತಿಳಿಸಿದೆ.

ತಮ್ಮ ಅಧ್ಯಕ್ಷತೆಯಲ್ಲಿನ ಧರ್ಮಕರ್ತರ ಸಂಘ ಕಡೆಯ ಸಮಾವೇಶದ ನಂತರ ಪತ್ರಕರ್ತರ ಸಮಾವೇಶದಲ್ಲಿ ಪಾಲುಗೊಂಡ ತಿ.ತಿ.ದೇ. ಅಧ್ಯಕ್ಷ ಶ್ರೀ ಟಿ. ಸುಬ್ಬರಾಮಿರೆಡ್ಡಿ ಅವರು ಈ ವಿಷಯವನ್ನು ತಿಳಿಸಿದರು.

* * * * *

ತಿರುಮಲೆಯಲ್ಲಿ ಶ್ರೀ ವೆಂಕಟೇಶ್ವರ ಸ್ವಾಮಿ ಪ್ರಸಾದವಾದ ಲಾಡುವಿನ ಬೆಲೆ ಈ ಮೊದಲು ಐದು ರೂಪಾಯಿಗಳಿಗೆ ಏರಿಸಿದ್ದು ಅದನ್ನು ಹಿಂದಿನಂತೆಯೇ ಪ್ರತಿಯೊಂದಕ್ಕೆ ನಾಲ್ಕು ರೂಪಾಯಿಗಳಂತೆಯೇ ಮಾರಾಟ ಮಾಡಬೇಕೆಂದು ತೀರ್ಮಾನಿಸಲಾಗಿದೆ ಎಂದೂ ಅವರು ತಿಳಿಸಿದರು.

ಈ ಮಧ್ಯೆ ಲಾಡು ತಯಾರಿಕೆಯಲ್ಲಿ ಬಳಸುವ ಕಚ್ಚಾಪಸ್ತುಗಳ ಬೆಲೆ ವಿಪರೀತವಾಗಿ ಏರಿದ್ದರಿಂದ ವೆಚ್ಚವನ್ನು ತೂಗಿಸಲು, ನಷ್ಟವನ್ನು ತುಂಬಿಕೊಳ್ಳಲು ಲಾಡು ಬೆಲೆಯನ್ನು ಐದುರೂಪಾಯಿಗಳಿಗೆ ಏರಿಸಲಾಗಿದ್ದಿತು. ಆದರೆ ಹೆಚ್ಚಿದ ಬೆಲೆಯಲ್ಲಿ ಒಂದು ಭಾಗವನ್ನು ಮಿರಾಸಿದಾರರಿಗೆ ನೀಡಬೇಕಾದ ವಿಧಿಯಿಂದಾಗಿ ನಷ್ಟ ತುಂಬಿಕೊಳ್ಳುವಿಕೆ ಅಲ್ಪಪ್ರಮಾಣದ್ದಾಗಿಯೇ ಉಳಿಯುವುದರಿಂದಾಗಿ ಹಿಂದಿನ ಬೆಲೆಗೇ ಮರಳಿ ಬರುವುದಾಯಿತು ಎನ್ನಲಾಗಿದೆ.

## ತಿ. ತಿ. ದೇ. ಆಡಳಿತಕ್ಕೆ ವಿಶೇಷ ಪ್ರಾಧಿಕಾರ

ತಿ. ತಿ. ದೇವಸ್ಥಾನಗಳ ಆಡಳಿತ ನಿರ್ವಹಣೆಗೆಂದು ಆಂಧ್ರಪ್ರದೇಶ ಸರ್ಕಾರ ನಾಮಕರಣ ಮಾಡಿದ ಧರ್ಮಕರ್ತರ ಮಂಡಳಿಯ ಕಾಲಪರಿಮಿತಿ ಡಿಸೆಂಬರ್ 15ಕ್ಕೆ ಮುಗಿದಿದ್ದು, ಹೊಸ ಧರ್ಮಕರ್ತರ ಮಂಡಳಿಯ ನಾಮಕರಣ ಆಗಬೇಕಿದ್ದು, ಈ ನಡುವೆ ಆಡಳಿತ ನಿರ್ವಹಣೆಗಾಗಿ ಕಾನೂನು ರೀತ್ಯಾ ಒಂದು ವಿಶೇಷ ಪ್ರಾಧಿಕಾರವನ್ನು ನೇಮಕ ಮಾಡಲಾಗಿದೆ. ಮೂವರು ಸದಸ್ಯರ ಈ ಪ್ರಾಧಿಕಾರದಲ್ಲಿ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ. ವಿ. ಎಲ್. ಮೂರ್ತಿ, ಆಂಧ್ರಪ್ರದೇಶದ ಮುಜರಾಯಿ ಇಲಾಖಾ ಕಮಿಷನರ್ ಶ್ರೀ ಸತ್ಯರಾಜು, ರೆವಿನ್ಯೂ ಇಲಾಖಾ ಮುಖ್ಯ ಕಾರ್ಯದರ್ಶಿ ಶ್ರೀ ರಾಜಾಜಿ ಅವರುಗಳು ಇರುವರು. ಪ್ರಾಧಿಕಾರದ ಅಧ್ಯಕ್ಷರಾಗಿ ಮುಖ್ಯ ಕಾರ್ಯದರ್ಶಿ ಶ್ರೀ ರಾಜಾಜಿ ಡಿಸೆಂಬರ್ 19 ರಂದು ಶನಿವಾರ ಪದವಿಸ್ವೀಕಾರದ ಪ್ರಮಾಣವಚನವನ್ನು ಸ್ವೀಕರಿಸಿದರು.

## ಸ್ವಾಮಿಗೆ ನಾಗಾಭರಣದ ಕಾಣಿಕೆ

ಬೊಂಬಾಯಿನಲ್ಲಿ ತಯಾರಾದ ಸುಮಾರು 50 ಲಕ್ಷರೂ ಬೆಲೆಯ ನಾಗಾಭರಣಗಳನ್ನು ಯು.ಬಿ. ಗ್ರೂಪ್ ನೇತಾರ ಶ್ರೀ ವಿಜಯ ಮಲ್ಯ ಅವರು ಶುಕ್ರವಾರ 18--12--92 ರಂದು ಸ್ವಾಮಿಗೆ ಕಾಣಿಕೆಯಾಗಿ ನೀಡಿದರು. ತಿ.ತಿ.ದೇ. ಗಳ ಪರವಾಗಿ ಈ ಆಭರಣವನ್ನು ತಿ.ತಿ.ದೇ. ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ಬಿ. ವೆಂಕಟರಾಮಯ್ಯ ಅವರು ಸ್ವೀಕರಿಸಿದರು. ಈ ಕಾರ್ಯಕ್ರಮದಲ್ಲಿ ಡೆ.ಇ.ಓ. ಶ್ರೀ ಪಟ್ಟಾಭಿರೆಡ್ಡಿ, ಆಲಯ ಪೇಷ್ಕಾರ್ ಶ್ರೀ ಮುನಿರತ್ನಂ ನಾಯುಡು, ಪೊಟ್ಟು ಪೇಷ್ಕಾರ್ ಶ್ರೀ ತಿರುಪತಿರಾವ್ ಮೊದಲಾದವರೂ ಇದ್ದರು.

## ತಿರುಮಲೆಗೆ ಸರ್ವೋಚ್ಚ ನ್ಯಾಯಾಧೀಶರು

ಭಾರತದ ಸರ್ವೋಚ್ಚ ನ್ಯಾಯಾಲಯದ ಪ್ರಧಾನ ನ್ಯಾಯಮೂರ್ತಿ ಶ್ರೀ ಲಲಿತಮೋಹನ ಶರ್ಮ ಡಿಸೆಂಬರ್ 21 ರಂದು ಸೋಮವಾರ ಬೆಳಗ್ಗೆ ಸಕುಟುಂಬರಾಗಿ ತಿರುಮಲೆಗೆ ಆಗಮಿಸಿ ಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಿದರು.

ಆಲಯ ಮರ್ಯಾದೆಗಳಂತೆ ಪ್ರಧಾನ ನ್ಯಾಯಮೂರ್ತಿಗಳಿಗೆ ಇಸ್ತಿಕಪಾಲ ಸ್ವಾಗತವನ್ನು ಮಹಾದ್ವಾರದಲ್ಲಿ ನೀಡಲಾಯಿತು. ಸ್ವಾಮಿ ದರ್ಶನಾನಂತರ ಅವರಿಗೆ ರಂಗನಾಯಕ ಮಂಟಪದಲ್ಲಿ ವೇದಾಶೀರ್ವಾದ ನೀಡಲಾಯಿತು. ನಂತರ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ.ವಿ.ಎಲ್.ಎನ್. ಮೂರ್ತಿ ಅವರು -- ಪ್ರಧಾನ ನ್ಯಾಯಮೂರ್ತಿಗಳಿಗೆ ವಸ್ತ್ರಬಹುಮಾನ ನೀಡಿ, ಸ್ವಾಮಿ ಪ್ರಸಾದವನ್ನು ನೀಡಿದರು. ಅವರಿಗೆ ಸ್ವಾಗತ ನೀಡಿದವರಲ್ಲಿ ಕಾರ್ಯನಿರ್ವಹಣಾಧಿಕಾರಿಗಳೊಡನೆ, ಡೆ. ಇ. ಓ. ಶ್ರೀ ಪಟ್ಟಾಭಿ ರೆಡ್ಡಿ ಅವರೂ ಇದ್ದರು.

## 1.6 ಕೋಟಿ ರೂಪಾಯಿಗಳ ಸ್ವರ್ಣರಥ -- ನಿರ್ಮಾಣದ ಹಂತದಲ್ಲಿ

ತಿರುಮಲೆಯ ಶಿಖರಗಳಲ್ಲಿ ನೆಲೆಗೊಂಡಿರುವ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ಸ್ವಾಮಿ ಬೀದಿ ಮೆರವಣಿಗೆಗಾಗಿ ಚಿನ್ನದ ರಥವನ್ನು ತ್ವರಿತ ಗತಿಯಿಂದ ನಿರ್ಮಿಸಲಾಗುತ್ತದೆ.

1.60 ಕೋಟಿ ರೂಗಳ ಈ ಬಂಗಾರದ ರಥ, 13 ಅಡಿ ಉದ್ದ ಹಾಗೂ 9 ಅಡಿ ಅಗಲವಿದ್ದು, ಮರದ ಕೆತ್ತನೆ ಕೆಲಸ, ಅವರ ವಿವಿಧ ಭಾಗಗಳ ಜೋಡನೆ ತ್ವರಿತಗತಿಯಿಂದ ಮುಂದುವರೆದಿದೆ. 1100 ಕಿಲೋಗ್ರಾಮ್ ತೂಕದ ತಾಮ್ರ 1.07 ಲಕ್ಷ ರೂಪಾಯಿಗಳ ವೆಚ್ಚದ ಈ ರಥದಲ್ಲಿ, ವಿವಿಧ ದೇವರುಗಳು ಸ್ವಾಮಿಯನ್ನು ಬಳಸಿ ನಿಲ್ಲಲು ಅನಕೂಲವಿದೆ. ಪೂರ್ವಕ್ಕೆ ಶ್ರೀ ವೇಣುಗೋಪಾಲ, ಶ್ರೀದೇವಿ, ಭೂದೇವಿಯೊಡನೆ ನಿಂತ, ಭಂಗಿಯ ಮರದ ಉಬ್ಬ ಕೆತ್ತನೆಗಳಿವೆ. ಪಶ್ಚಿಮದಲ್ಲಿ ಶ್ರೀಕೃಷ್ಣ, ಗೋವಿಂದ, ನರಸಿಂಹ, ಗರುಡ, ಬಾಲಕೃಷ್ಣ ಮುಂತಾದ ವಿಗ್ರಹಗಳಿವೆ. ಉತ್ತರದ ಕಡೆ ಶ್ರೀದೇವಿ, ನಾರಾಯಣ, ವೈಕುಂಠನಾಥ, ವಿಮಾನ ವೆಂಕಟೇಶ್ವರ, ಆಂಜನೇಯ ಮೂರ್ತಿಗಳೂ ದಕ್ಷಿಣಕ್ಕೆ ರಾಮಚಂದ್ರ, ವರಾಹ, ಭೂದೇವಿ. ಶ್ರೀದೇವಿಗಳನ್ನೂ ಕಾಣಬಹುದು.

ಇಡೀ ದಾರುರಥದ ಹೊರಮೈಯ್ಯನ್ನು ತಾಮ್ರದಿಂದ ತಯಾರಿಸಿ ಅದರ ಮೇಲೆ ಚಿನ್ನದ ಲೇಪ ಮಾಡಲಾಗುವುದು. ಇದಕ್ಕಾಗಿ 25 ಕಿಲೋ ತೂಕದ ಬಂಗಾರವನ್ನು ಬಳಸಲಾಗುವುದು.

ತಿರುಪತಿಯ ಶ್ರೀ ಗೋವಿಂದ ರಾಜಸ್ವಾಮಿ ಆಲಯದಲ್ಲಿನ ವಾಹನ ಮಂಟಪದ ಬಳಿಯಲ್ಲಿ ತಯಾರಾಗುತ್ತಿರುವ ಸ್ವರ್ಣರಥಕ್ಕೆ ಈಗಾಗಲೇ ಮರದ ಕೆಲಸ ಪೂರ್ತಿಯಾಗಿದೆಯೆಂದು ವರದಿಗಳು ತಿಳಿಸಿವೆ.



# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ (ವೈಕುಂಠ) ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್‌ಪ್ರದರ್ಶನ, ಭಕ್ತಿ ಸಂಗೀತ.

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ ೭-ನೇ ಮೈಲಿಯ ಬಳಿ ವೈದ್ಯಸೌಲಭ್ಯ ಉಪಹಾರ ಸೌಲಭ್ಯ ಕ್ಯಾಂಟೀನ್.

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಯಾತ್ರಿಕರನ್ನು ಪಂಡಾಗಳು, ವಂಚಕರಿಂದ ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಂದು ಅಧಿಕಾರಿ ಮತ್ತು ಸಿಬ್ಬಂದಿ.

**ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.**

ಗಮನಿಕೆ: ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ ೮--೩೦ ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ ೧೦-೩೦ ರಿಂದ ೧--೦೦ ಗಂಟೆಯವರೆಗೆ ಕೆಲಸಮಾಡುತ್ತದೆ.

## ತಿರುಮಲೆಯಲ್ಲಿ ಪ್ರಧಾನಮಂತ್ರಿ

ಭಾರತದ ಪ್ರಧಾನ ಮಂತ್ರಿ ಶ್ರೀ ಪಿ. ವಿ. ನರಸಿಂಹರಾವ್ ಅವರು ಕನ್ಯಾಕುಮಾರಿಯಲ್ಲಿ ವಿವೇಕಾನಂದರ ಭಾರತ ಪರಿಕ್ರಮ ಶತಾಬ್ದಿ ಉತ್ಸವದಲ್ಲಿ ಪಾಲುಗೊಂಡು, ತಿರುಮಲೆಗೆ ಆಗಮಿಸಿ ಸ್ವಾಮಿ ಸೇವೆಯಲ್ಲಿ ಭಾಗವಹಿಸಿದರು.

ದಿನಾಂಕ 28--12--92 ರಂದು ಸಂಜೆ ತಿರುಮಲೆಯನ್ನು ಸೇರಿದ ಪ್ರಧಾನ ಮಂತ್ರಿಗಳಿಗೆ ಶ್ರೀ ಪದ್ಮಾವತೀ ಅತಿಥಿಗೃಹದಲ್ಲಿ ಬಿಡಾರವನ್ನು ಏರ್ಪಡಿಸಲಾಗಿದ್ದಿತು. 5.30 ಗಂಟೆಯ ಹೊತ್ತಿಗೆ ಆಂಧ್ರಪ್ರದೇಶದ ಮುಖ್ಯ ಮಂತ್ರಿ ಶ್ರೀ ವಿಜಯಭಾಸ್ಕರ ರೆಡ್ಡಿ ಹಾಗೂ ಮಾಜಿ ಮುಖ್ಯ ಮಂತ್ರಿ ಶ್ರೀ ಜನಾರ್ದನ ರೆಡ್ಡಿ ಅವರುಗಳೊಂದಿಗೆ ದೇವಾಲಯಕ್ಕೆ ಅವರು ಆಗಮಿಸಿದಾಗ ಅವರಿಗೆ ಸಂಪ್ರದಾಯದಂತೆ ಇಸ್ತಿಕಪಾಲ ಸ್ವಾಗತವನ್ನು ಏರ್ಪಡಿಸಲಾಯಿತು. ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ. ವಿ. ಎಲ್. ಎನ್. ಮೂರ್ತಿ, ತಿ.ತಿ.ದೇ. ವಿಶೇಷ ಪ್ರಾಧಿಕಾರದ ಅಧ್ಯಕ್ಷ ಶ್ರೀ ರಾಜಾಜಿ (ಮುಖ್ಯ ಕಾರ್ಯದರ್ಶಿ) ಶ್ರೀ ಸತ್ತಿರಾಜು (ಮುಜರಾಯಿ ಇಲಾಖಾ ಕಮಿಷನರ್) ತಿ.ತಿ.ದೇ. ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಬಿ. ವೆಂಕಟರಾಮಯ್ಯ ಮೊದಲಾದ ಅಧಿಕಾರಿಗಳು, ಆಂಧ್ರಪ್ರದೇಶದ ಮುಜರಾಯಿ ಇಲಾಖಾಮಂತ್ರಿ ಶ್ರೀ ಕೆ. ರಂಗಾರಾವ್ ಅವರುಗಳು ಪ್ರಧಾನಿಯನ್ನು ಸ್ವಾಗತಿಸಿದರು.

ಶ್ರೀ ವೆಂಕಟೇಶ್ವರಸ್ವಾಮಿಯನ್ನು ಆರಾಧಿಸಿದ ಪ್ರಧಾನಮಂತ್ರಿಗಳಿಗೆ ರಂಗನಾಯಕ ಮಂಟಪದಲ್ಲಿ ವೇದೋಕ್ತ ಆಶೀರ್ವಾದವನ್ನು ನೀಡಲಾಯಿತು. ಪ್ರಧಾನಮಂತ್ರಿಗಳನ್ನು ಸ್ವಾಮಿಯ ಶೇಷ ವಸ್ತ್ರದಿಂದ ಸನ್ಮಾನಿಸಲಾಯಿತು. ಅವರಿಗೆ ಸ್ವಾಮಿ ಪ್ರಸಾದಗಳನ್ನು ನೀಡಲಾಯಿತು.

ಪ್ರಧಾನ ಮಂತ್ರಿಗಳು ಮಂಗಳವಾರ ಬೆಳಗ್ಗೆ ಮತ್ತೆ ಸ್ವಾಮಿದರ್ಶನವನ್ನು ಪಡೆದು ದೆಹಲಿಯತ್ತ ಪಯಣ ಬೆಳೆಸಿದರು.

ಪ್ರಧಾನ ಮಂತ್ರಿಗಳ ತಿರುಮಲೆಯ ಯಾತ್ರೆಯಲ್ಲಿ ಆಂಧ್ರಪ್ರದೇಶದ ಮಂತ್ರಿಗಳು ಶ್ರೀ ಮೈಸೂರಾರೆಡ್ಡಿ, ಶ್ರೀ ಕೆ. ರಂಗಾರಾವ್, ಶಾಸಕರು, ಅಧಿಕಾರಿಗಳು ಇದ್ದರು.



## ಧಾರ್ಮಿಕ ಸಮನ್ವಯ

### ---ಶ್ರೀ ಶ್ರೀ ಕಂಚಿ ಕಾಮಕೋಟಿ ಪೀಠಾಧಿಪತಿಗಳು.

ವಿವಿಧ ಧರ್ಮಗಳ ಅನುಯಾಯಿಗಳ ಮಧ್ಯೆ ಸ್ಪರ್ಧೆ ಅರ್ಥವಿಲ್ಲದ್ದು. ಧಾರ್ಮಿಕ ಪರಿವರ್ತನೆಯ ಪ್ರಯತ್ನಗಳಲ್ಲಿ ರೈಲ್ವೆ ನಿಲ್ದಾಣದ ಬಳಿ ಪ್ರಯಾಣಿಕರನ್ನು ವಿವಿಧ ವಾಹನಚಾಲಕರು ತಮ್ಮ ವಾಹನಗಳಿಗೆ ಆಕರ್ಷಿಸುವ ಪ್ರಯತ್ನದಂತೆ ಮಾತ್ರ. ವಾಹನಚಾಲಕರ ನಡಾವಳಿಗೆ ಅರ್ಥವಿರಬಹುದಾದರೂ ಧಾರ್ಮಿಕ ನಾಯಕರ ಪ್ರಯತ್ನಗಳು ಮಾತ್ರ ನಿರರ್ಥಕ. ಎಲ್ಲ ಧರ್ಮಪಂಥಗಳ ದೇವರೂ ಒಬ್ಬನೇ ಆಗಿರುವುದರಿಂದ, ಒಂದು ಧರ್ಮವನ್ನು ಬಿಟ್ಟು ಮತ್ತೊಂದನ್ನು ಅವಲಂಬಿಸುವ ಅಗತ್ಯವಿಲ್ಲ. ಎಂದರೆ ಎಲ್ಲ ಧರ್ಮಗಳು ಸರ್ವಸಮವೆಂದೇನಲ್ಲ. ಮುಖ್ಯವಾದದ್ದು ಸರ್ವಸಮತೆಯಲ್ಲ; ಏಕತೆ. ದೇವರು ಒಬ್ಬನೇ ಎಂಬ ಸರ್ವೋಚ್ಚ ಸತ್ಯವನ್ನು ಸಾರಿ ಹೇಳುವುದರಲ್ಲಿ ಎಲ್ಲ ಧರ್ಮಗಳೂ ಏಕತೆಯನ್ನು ಹೊಂದಿವೆ. ದೇವರಲ್ಲಿ ಭೇದವಿಲ್ಲವೆಂದಮೇಲೆ ಯಾವುದೇ ಧರ್ಮವನ್ನಾದರೂ ಟೀಕಿಸುವುದೇಕೆ? ಮಾನವನ ವಿವಿಧ ಅಭಿರುಚಿಗಳಿಗೆ ತಕ್ಕಂತೆ ಸುಲಭಗೊಳಿಸಲು ಮಾತ್ರವೇ ಧರ್ಮಗಳು ವಿವಿಧವಾಗಿವೆ. ಇದರಿಂದಾಗಿ ಧಾರ್ಮಿಕ ದ್ವೇಷ ಅಸಹಿಷ್ಣುತೆಗಳಿಗೆ ದಾರಿಯಾಗಬಾರದು.

* * * * *

# ತಿಂಗಳಿನ ಮುಖ್ಯದಿನಗಳು

## ಮಾರ್ಚ್ --- 1993

| | |
|---|---|
| 2. ಮಂಗಳವಾರ | ತಿರುಕಚ್ಚಿನಂಬಿ ಶಾತ್ತುಮೊರೆ. |
| 4. ಗುರುವಾರ | ಕುಲಶೇಖರ ಆಳ್ವಾರರ ವರ್ಷ ತಿರುನಕ್ಷತ್ರ. ತಿರುಮಲೆಯಲ್ಲಿ ವಾರ್ಷಿಕ ತೆಪ್ಪೋತ್ಸವಾರಂಭ. |
| 7. ಭಾನುವಾರ | ಹೋಳಿ ಹಬ್ಬ. |
| 8. ಸೋಮವಾರ | ತಿರುಮಲೆಯಲ್ಲಿ ವಾರ್ಷಿಕ ತೆಪ್ಪೋತ್ಸವ ಸಮಾಪ್ತಿ. |
| 14. ಭಾನುವಾರ | ಮೀನ ಸಂಕ್ರಮಣ. |
| 21. ಭಾನುವಾರ | ತಿರುಪತಿ ಶ್ರೀ ಕೋದಂಡರಾಮಸ್ವಾಮಿ ಬ್ರಹ್ಮೋತ್ಸವದ ಅಂಕುರಾರ್ಪಣೆ. |
| 22. ಸೋಮವಾರ | ಶಾಲಿವಾಹನ ಶಕ ವರ್ಷಾರಂಭ 1915. |
| 24. ಬುಧವಾರ | ಶ್ರೀ ಮುಖನಾಮ ಸಂವತ್ಸರ ಯುಗಾದಿ. |
| 30. ಮಂಗಳವಾರ | ತಿರುಪತಿ ಶ್ರೀ ಕೋದಂಡರಾಮಸ್ವಾಮಿ ಬ್ರಹ್ಮೋತ್ಸವದ ಧ್ವಜಾವರೋಹಣ. |



# ಮುಂದಿನ ಸಂಚಿಕೆಯಲ್ಲಿ

## ಸಪ್ತಗಿರಿ --- ಮಾರ್ಚ್ 1993

**ಮಾಯೆ -- ಅಕ್ಕನ ವಚನಗಳಲ್ಲಿ.**
--ದೊಡ್ಡಯ್ಯಶಾಸ್ತ್ರಿ

**ವಸುಧೈವ ಕುಟುಂಬಕಂ**
--ವಿ. ಕೆ. ವಿಶ್ವೇಶ್ವರ

**ಸೊಗಸು ನೋಡಿರೇ**
--ಬಿ. ನ. ಗುಂಡೂರಾವ್

**ತಂಜಾವೂರು**
--ಆದ್ಯರಾಮಾಚಾರ್ಯ

**ಬ್ರಹ್ಮಾನುಭವ**
--ಪಾರ್ವತಿ ಕೃ. ನ. ಮೂರ್ತಿ

**ಜೊತೆಗೇ ಆಕರ್ಷಕವಾದ ಮತ್ತೂ ಹಲವಾರು ಸಾಮಯಿಕ ಲೇಖನಗಳು ತಮ್ಮ ಪ್ರತಿಯನ್ನು ಇಂದೇ ಕಾದಿರಿಸಿ.**

---

ಸೂಚನೆ : ಸಪ್ತಗಿರಿ ವಾರ್ಷಿಕ ಚಂದಾ ಹನ್ನೆರಡು ರೂಪಾಯಿ ಮಾತ್ರ. ತಮ್ಮ ಚಂದಾ ಹಣವನ್ನು ಎಂ. ಓ. ಡಿ.ಡಿ. ಯ ಮೂಲಕ ಸಂಪಾದಕರು, ಸಪ್ತಗಿರಿ, ತಿ.ತಿ.ದೇ. ತಿರುಪತಿ -- ಇವರಿಗೆ ಕಳುಹಿಸಿ. ವಿಳಾಸವನ್ನು ಸ್ಪಷ್ಟವಾಗಿ ಬರೆಯಿರಿ ಎಂದು ವಿನಂತಿ.



ತಿರುಮಲೆ -- ತಿರುಪತಿ ದೇವಸ್ಥಾನಗಳು

# ಅಭಿಷೇಕ ಸೇವೆಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ಪರಿಧಿಯ ಆರು ದೇವಾಲಯಗಳಲ್ಲಿ ವಾರಕ್ಕೆ ಒಮ್ಮೆ ನಡೆಯುವ ಅಭಿಷೇಕ ಸಮಯದಲ್ಲಿ ಭಕ್ತರು ಒಬ್ಬರಿಗೆ ೫ ರೂಪಾಯಿಸಂತೆ ಶುಲ್ಕ ನೀಡಿ ಅಭಿಷೇಕ ದರ್ಶನ ಹೊಂದಬಹುದು. ವಿವಿಧೆಡೆಗಳಲ್ಲಿರುವ ಈ ದೇವಾಲಯಗಳೆಂದರೆ---

1. ಶ್ರೀ ವೇದನಾರಾಯಣಸ್ವಾಮಿ ಆಲಯ --ನಾಗುಲಾಪುರಂ.
2. ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ --ನಾರಾಯಣವನಂ.
3. ಶ್ರೀ ವೇಣುಗೋಪಾಲಸ್ವಾಮಿ ಆಲಯ --ಕಾರ್ವೇಟಿನಗರ.
4. ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯ --ಅಪ್ಪಲಾಯಗುಂಟ.
5. ಶ್ರೀ ವೆಂಕಟೇಶ್ವರಸ್ವಾಮಿ ಆಲಯ --ಶ್ರೀನಿವಾಸಮಂಗಾಪುರ.
6. ಆಲಯಸಮುದಾಯ --ಹೃಷೀಕೇಶ.

ಭಕ್ತ ಯಾತ್ರಿಕರು ಈ ವಿಶೇಷ ಸೇವೆಯನ್ನು ದರ್ಶಿಸಬೇಕೆಂದು ವಿನಂತಿಸಲಾಗಿದೆ.

**ತಿ. ತಿ. ದೇವಸ್ಥಾನಗಳು,**
ತಿರುಪತಿ.



Edited and published on behalf of T.T. Devasthanams by K. Subba Rao, M.A., and Printed at T.T.D. Press.
by M. Vijayakumar Reddy, Manager, T.T.D. Press, Tirupati - 517 507

